ಅಥ ಋಗ್ವೇದೀಯಃ

# ಪೂರ್ವಷೋಡಶಸಂಸ್ಕಾರಪ್ರಯೋಗಃ

(ಉತ್ಸರ್ಜನೋಪಾಕರ್ಮ, ಋತುಶಾಂತಿ, ಅಶ್ವತ್ಥೋದ್ಯಾಪನಾ, ಅರ್ಕವಿವಾಹ, ಕುಂಭವಿವಾಹ, ಅಶ್ವತ್ಥವಿವಾಹ, ಕದಳೀವಿವಾಹ, ಕಾತ್ಯಾಯನೀವ್ರತ, ದೂರ್ವಾಯುಷ್ಯಚರುಹೋಮ, ವಿಶೇಷಕಲಶಪ್ರತಿಷ್ಠಾಪನಾ, ಪ್ರಮಾಣಶ್ಲೋಕಾಷ್ಟ)


ಸಂಪಾದಕಃ

ವೇದಮೂರ್ತಿ ಚಿತ್ರಾಪುರ ಗೋಪಾಲಕೃಷ್ಣ ಆಚಾರ್ಯಃ

ಗ್ರಂಥಪರಿಶೋಧಕಃ

ನಿವೃತ್ತ ಪ್ರಾಚಾರ್ಯಃ ಶ್ರೀಲಕ್ಷ್ಮೀನಾರಾಯಣಶರ್ಮಾ





ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ, ಉಡುಪಿ.

*Ṛgvedīyaḥ Pūrvaṣoḍaśa Saṃskāra Prayogaḥ*

The Sixteen Sanctifying Rites : Edited by Vedamurthi Chithrapura Gopalakrishna Acharya, scrutinized by Prof. P. Lakshminarayana Sharma, Ex-Principal, SMSP Sanskrit College, Udupi. Published by Srimanmadhwa Siddhantha Granthalaya, Car Street, Udupi-576 101. [Ph. 2526755]

Year of Publication : 2010 (Third Edition) 

Pages : xxvii + 383

Price Rs. **225 - 00**

ಪ್ರಥಮ ಮುದ್ರಣ: ಶಕವರ್ಷ ೧೯೨೨ *[ಕ್ರಿ.ಶ. 2000]*
ದ್ವಿತೀಯ ಮುದ್ರಣ: ಶಕವರ್ಷ ೧೯೨೫ *[ಕ್ರಿ.ಶ. 2003]*
ತೃತೀಯ ಮುದ್ರಣ: ಶಕವರ್ಷ ೧೯೩೨ *[ಕ್ರಿ.ಶ. 2010]*
*ಪ್ರಕಾಶಕರು:*
**ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ**
ರಥಬೀದಿ, ಉಡುಪಿ *-576 101.* [Phone: 2526755]

*ಕಂಪ್ಯೂಟರ್ ಅಕ್ಷರಸಂಯೋಜನೆ:*
'ಶ್ರೀನವದುರ್ಗಾ ಲೇಸರ್‌ಟೆಕ್' *C/o.* ಡಾ। ಕೆ. ಪದ್ಮನಾಭ ಕೇಕುಣ್ಣಾಯ, ಉಡುಪಿ*-576102.* [Phone: 2531159; 9342438727]
ಮುದ್ರಕರು:
ಮಣಿಪಾಲ್ ಪ್ರೆಸ್ ಲಿಮಿಟೆಡ್, ಮಣಿಪಾಲ.


# ಪ್ರಕಾಶಕರ ಮಾತು

ಈ ಕರ್ಮಭೂಮಿಯಲ್ಲಿ ಜನ್ಮವೆತ್ತಿದ ಪ್ರತಿಯೊಬ್ಬ ಬ್ರಾಹ್ಮಣನಿಗೂ ಸ್ವಜಾತಿವಿಹಿತಸಂಸ್ಕಾರಗಳು ಅವಶ್ಯಕರ್ತವ್ಯಗಳಾಗಿವೆ. ಬ್ರಾಹ್ಮಣನಾದವನಿಗೆ ಷೋಡಶಸಂಸ್ಕಾರಗಳನ್ನು ಸ್ಮೃತಿಗಳಲ್ಲಿ ಮತ್ತು ಗೃಹ್ಯಸೂತ್ರಗಳಲ್ಲಿ ಹೇಳಲಾಗಿದೆ. ವಿಹಿತಕಾಲದಲ್ಲಿ ನಡೆಸುವ ಈ ಸಂಸ್ಕಾರಗಳಿಂದ ಆತನ ಆತ್ಮ ಮತ್ತು ಮನಸ್ಸು ಪರಿಷ್ಕಾರ ಹೊಂದಿ ಸದಾಚಾರಸಂಪನ್ನ, ಸುಸಂಸ್ಕೃತ ಮಾನವನೆಂದೆನಿಸಿ ಇಹದಲ್ಲೂ ಪರದಲ್ಲೂ ಸುಖಿಯಾಗಬಲ್ಲನು. ಇಂದಿನ ಲೌಕಿಕ ಶಿಕ್ಷಣಕ್ರಮ ಮತ್ತು ಆಧುನಿಕ ಜೀವನ ವ್ಯವಸ್ಥೆಯಿಂದಾಗಿ ಕೆಲವು ಸಂಸ್ಕಾರಗಳು ರೂಢಿಯಲ್ಲಿಲ್ಲ. ಪ್ರಾಚೀನ ಭಾರತದಲ್ಲಿ ಬ್ರಾಹ್ಮಣನು ಉಪನಯನದ ಬಳಿಕ ಸಮಾವರ್ತನಪರ್ಯಂತ ಗುರುಕುಲವಾಸದಲ್ಲಿದ್ದು ವೇದಾಧ್ಯಯನವನ್ನು ಮಾಡಿಕೊಂಡು ಬರುತ್ತಿದ್ದ ಕಾಲದಲ್ಲಿ ಈ ಎಲ್ಲಾ ಷೋಡಶಸಂಸ್ಕಾರಗಳು ರೂಢಿಯಲ್ಲಿದ್ದವು. ಈಗಿನ ಜನಜೀವನ ಪದ್ಧತಿಯಲ್ಲಿ ಬ್ರಾಹ್ಮಣನಿಗೂ ಲೌಕಿಕಶಿಕ್ಷಣ ಮತ್ತು ಉದ್ಯೋಗ ಅನಿವಾರ್ಯವಾಗಿದ್ದರೂ ಸಾಧ್ಯವಾದಷ್ಟು ಈ ಷೋಡಶಸಂಸ್ಕಾರಗಳನ್ನು ವಿಹಿತಕಾಲದಲ್ಲಿ ಮಾಡುವುದು ಪ್ರಶಸ್ತವಾಗಿದೆ.

ಈ ಷೋಡಶಸಂಸ್ಕಾರಗಳ ಬಗ್ಗೆ ಮಾಧ್ವಸಂಪ್ರದಾಯಕ್ಕೆ ಅನುಗುಣವಾಗಿ ಇದುವರೆಗೆ ಯಾವುದೇ ಪುಸ್ತಕಗಳು ಇಲ್ಲದಿರಲು ನಾವು ಪೌರೋಹಿತ್ಯ ಪ್ರಾಧ್ಯಾಪಕ ವೇ॥ ಚಿತ್ರಾಪುರ ಗೋಪಾಲಕೃಷ್ಣ ಆಚಾರ್ಯರಲ್ಲಿ ಈ ವಿಷಯಗಳ ಬಗ್ಗೆ ಒಂದು ಸಮಗ್ರ ಗ್ರಂಥವನ್ನು ಪ್ರಕಟಿಸುವ ನಮ್ಮ ಆಶಯವನ್ನು ಹೇಳಿಕೊಂಡಾಗ, ಅವರು ಬಹಳ ಸಂತೋಷದಿಂದ ತಮ್ಮ ಹಿರಿಯರು ಬಹಳ ಹಿಂದೆಯೇ ತಾಳೆಪತ್ರಗಳಲ್ಲಿ ತುಳುಲಿಪಿಯಲ್ಲಿ ಬರೆದಿಟ್ಟಿದ್ದ ಪ್ರಯೋಗಗಳನ್ನು ಕನ್ನಡಲಿಪಿಯಲ್ಲಿ ಬರೆದುಕೊಟ್ಟಿರುತ್ತಾರೆ.

ಈ ಎರಡನೇ ಮುದ್ರಣದಲ್ಲಿ ಕೆಲವು ಪರಿಷ್ಕರಣೆಗಳನ್ನು ಮಾಡಲಾಗಿದೆ. ಮತ್ತು ಆತ್ಮೀಯರ ಸಲಹೆಯ ಮೇರೆಗೆ ವಿವಾಹ ಪ್ರಕರಣದಲ್ಲಿ ಅಭಿಮರ್ಶನ, ಸೂತ್ರವೇಷ್ಟನ(ಕಂಕಣಬಂಧನ), ಅಕ್ಷತಾರೋಪಣ, ಮಂಗಲಸೂತ್ರಬಂಧನ, ನಾಗಬಲಿ ಇತ್ಯಾದಿ ಕೆಲವು ಪ್ರಯೋಗಗಳನ್ನು ಸೇರಿಸಲಾಗಿದೆ. ನಮ್ಮ ಆತ್ಮೀಯರಾದ ವಿದ್ವಾನ್ ಶ್ರೀ ಪಿ. ಲಕ್ಷ್ಮೀನಾರಾಯಣ ಶರ್ಮಾ, ಪ್ರಾಂಶುಪಾಲರು, ಶ್ರೀಮನ್ಮಧ್ವಸಿದ್ಧಾಂತ ಪ್ರಬೋಧಿನೀ ಸಂಸ್ಕೃತ ಮಹಾಪಾಠಶಾಲೆ, ಉಡುಪಿ ಇವರು ಈ ಗ್ರಂಥದ ಪರಿಶೋಧಕರಾಗಿ ಸಹಕರಿಸಿರುತ್ತಾರೆ. ಈ ಪುಸ್ತಕದ ಅಕ್ಷರಸಂಯೋಜಕರಾಗಿ ಡಾ। ಕೆ. ಪದ್ಮನಾಭ ಕೇಕುಣ್ಣಾಯರು ಉತ್ತಮವಾಗಿ ಕಾರ್ಯನಿರ್ವಹಿಸಿರುತ್ತಾರೆ ಮತ್ತು ಸುಂದರ ಮುದ್ರಣವನ್ನು ಮಣಿಪಾಲ ಪವರ್ ಪ್ರೆಸ್, ಮಣಿಪಾಲ ಇವರು ನಿರ್ವಹಿಸಿರುತ್ತಾರೆ. ಇವರೆಲ್ಲರಿಗೂ ನಮ್ಮ ಕೃತಜ್ಞತೆಗಳು.

ವಿಪ್ರಸಂದೋಹ ಈ ಪುಸ್ತಕದಿಂದ ಪ್ರಯೋಜನ ಹೊಂದಿತೆಂದಾದರೆ ನಮ್ಮೀ ಪರಿಶ್ರಮವು ಸಫಲವಾಗಿ ಸಜ್ಜನಸೇವೆಗೆ ಇನ್ನು ಮುಂದೆಯೂ ಮನಸ್ಸು ಉತ್ಸಾಹಗೊಳ್ಳುತ್ತದೆ.

ಇತಿ ಸಜ್ಜನವಿಧೇಯ,

**ಪ್ರಕಾಶಕ.**

# ವಿಷಯಾನುಕ್ರಮಣಿಕಾ


೧. ಮೊದಲ ನುಡಿ . . . . . . . . . . . . . . . . . 7
೨. ಕೃತಜ್ಞತೆಗಳು . . . . . . . . . . . . . . . . . 9
೩. ಸಂಸ್ಕಾರಗಳ ಪ್ರಸ್ತಾವನೆ . . . . . . . . . . . . . 11

೧. ಗಣಪತಿಸ್ತೋತ್ರಮ್ . . . . . . . . . . . . . . . 1
೨. ನವಗ್ರಹಸ್ತೋತ್ರಮ್ . . . . . . . . . . . . . . . 1
೩. ಷೋಡಶಸಂಸ್ಕಾರಾಃ . . . . . . . . . . . . . . . 1
೪. ಶೌನಕೀಯಪುಣ್ಯಾಹಲಘುಕಾರಿಕಾಃ . . . . . . . . . 2
೫. ಪುನಃಸಂಧಾನಮ್ . . . . . . . . . . . . . . . . 3
೬. ಗರ್ಭಾಧಾನಪ್ರಯೋಗಃ . . . . . . . . . . . . . . 24
೭. ಕಲಶಗ್ರಹಣವಿಧಿಃ . . . . . . . . . . . . . . . 30
೮. ಪುಂಸವನಾನವಲೋಭನಸೀಮಂತೋನ್ನಯನಾನಿ (ವಿಷ್ಣುಬಲಿಶ್ಚ) . . . . . . . . . . . . . . . 40
೯. ಜಾತಕರ್ಮ-ನಾಮಕರಣಪ್ರಯೋಗೌ . . . . . . . . . 64
೧೦. ಉಪನಿಷ್ಕ್ರಮಣಪ್ರಯೋಗಃ . . . . . . . . . . . . 72
೧೧. ಅನ್ನಪ್ರಾಶನಸಂಸ್ಕಾರಃ . . . . . . . . . . . . . 75
೧೨. ಚೂಡಾಕರ್ಮಪ್ರಯೋಗಃ . . . . . . . . . . . . . 78
೧೩. ಅಕ್ಷರಾಭ್ಯಾಸವಿಧಿಃ . . . . . . . . . . . . . . 86
೧೪. ಉಪನಯನಸಂಸ್ಕಾರಪ್ರಯೋಗಃ . . . . . . . . . . 87
೧೫. ಅವಕ್ಷಾರಣಮ್ . . . . . . . . . . . . . . . . 91
೧೬. ಅಗ್ನಿಕಾರ್ಯಮ್ . . . . . . . . . . . . . . . . 94
೧೭. ಗಾಯತ್ರ್ಯುಪದೇಶಃ . . . . . . . . . . . . . . 96
೧೮. ಅನುಪ್ರವಚನೀಯಹೋಮಃ . . . . . . . . . . . . 98
೧೯. ಮೇಧಾಜನನಮ್ . . . . . . . . . . . . . . . . 99
೨೦. ಮಹಾನಾಮ್ನೀ-ಮಹಾವ್ರತಮ್-ಉಪನಿಷದ್ವ್ರತಮ್-ಗೋದಾನಮ್ . . . . . . . . . . . . . . . 109
೨೧. ಸಮಾವರ್ತನಪ್ರಯೋಗಃ . . . . . . . . . . . . 110
೨೨. ಬ್ರಹ್ಮಚಾರಿವ್ರತಲೋಪಪ್ರಾಯಶ್ಚಿತ್ತಮ್ . . . . . . . 111
೨೩. ವಿವಾಹಪ್ರಯೋಗಃ . . . . . . . . . . . . . . 124
೨೪. ವಾಗ್ದಾನಮ್ . . . . . . . . . . . . . . . . . 127
೨೫. ಕನ್ಯಾವರಣಮ್ . . . . . . . . . . . . . . . . 131
೨೬. ಮಧುಪರ್ಕವಿಧಿಃ . . . . . . . . . . . . . . . 132
೨೭. ನಿರೀಕ್ಷಣಮ್ . . . . . . . . . . . . . . . . . 135
೨೮. ವಿವಾಹಹೋಮಃ . . . . . . . . . . . . . . . . 144

೨೯. ಗೃಹಪ್ರವೇಶವಿಧಿಃ . . . . . . . . . . . . . . 150
೩೦. ಅಭಿಮರ್ಶನಮ್ . . . . . . . . . . . . . . . . 152
೩೧. ಸೂತ್ರವೇಷ್ಟನಮ್ . . . . . . . . . . . . . . . 154
೩೨. ಮಂಗಲಸೂತ್ರಬಂಧನಮ್ . . . . . . . . . . . . . 157
೩೩. ಅಕ್ಷತಾರೋಪಣಮ್ . . . . . . . . . . . . . . . 155
೩೪ ನಾಗಬಲಿಃ 158
೩೫. ಔಪಾಸನವಿಧಿಃ . . . . . . . . . . . . . . . . 168
೩೬. ಉತ್ಸರ್ಜನೋಪಾಕರ್ಮಣೀ . . . . . . . . . . . . 171
೩೭. ದತ್ತಪುತ್ರವಿಧಾನಮ್ . . . . . . . . . . . . . . 200
೩೮. ಋತುಶಾಂತಿಃ . . . . . . . . . . . . . . . . 206
೩೯. ಅಶ್ವತ್ಥೋದ್ಯಾಪನಪ್ರಯೋಗಃ . . . . . . . . . . . 221
೪೦. ಸರ್ವತೋಭದ್ರಮಂಡಲಮ್ 228
೪೧. ಅರ್ಕವಿವಾಹಪ್ರಯೋಗಃ . . . . . . . . . . . . 263
೪೨. ಕುಂಭವಿವಾಹಪ್ರಯೋಗಃ . . . . . . . . . . . . 268
೪೩. ಅಶ್ವತ್ಥವಿವಾಹವಿಧಿಃ . . . . . . . . . . . . . 275
೪೪. ಕದಳೀ(ರಂಭಾ)ವಿವಾಹಃ . . . . . . . . . . . . 275
೪೫. ಕಾತ್ಯಾಯನೀವ್ರತವಿಧಿಃ . . . . . . . . . . . . 278
೪೬. ದೂರ್ವಾಯುಷ್ಯಚರುಹೋಮಪ್ರಯೋಗಃ . . . . . . . 281
೪೭. ವಿಶೇಷಕಲಶಪ್ರತಿಷ್ಠಾಪನವಿಧಿಃ . . . . . . . . . 290
೪೮. ಪ್ರಮಾಣಶ್ಲೋಕಾಃ 298
೪೯. ಶುದ್ಧಿವಿಚಾರಃ . . . . . . . . . . . . . . . . 298
೫೦. ಪ್ರೋಕ್ಷಣಲಕ್ಷಣಮ್ . . . . . . . . . . . . . . 298
೫೧. ಪುಣ್ಯಾಹಮಂಡಲಲಕ್ಷಣಮ್ . . . . . . . . . . . 298
೫೨. ಪಂಚಗವ್ಯವಿಚಾರಃ . . . . . . . . . . . . . . 298
೫೩. ನಾಂದೀವಿಚಾರಃ . . . . . . . . . . . . . . . 299
೫೪. ದೇವನಾಂದೀವಿಚಾರಃ . . . . . . . . . . . . . 300
೫೫. ನಾಂದೀವ್ಯಾಪ್ತಿಕಾಲಃ . . . . . . . . . . . . . 300
೫೬. ನಾಂದೀಕರ್ತೃನಿಯಮಾಃ . . . . . . . . . . . . 301
೫೭. ಸ್ಥಂಡಿಲರಚನಾವಿಚಾರಃ . . . . . . . . . . . . 301
೫೮. ಗೃಹ್ಯಕರ್ಮಸು ಅಗ್ನಿವಿಚಾರಃ . . . . . . . . . . 302
೫೯. ಅಗ್ನಿಪ್ರಜ್ವಲನಮ್ . . . . . . . . . . . . . . . 302
೬೦. ಸಮಿದ್ಧೋಮಸ್ಯ ಲಕ್ಷಣಮ್ . . . . . . . . . . . 303
೬೧. ಪರಿಷೇಚನಾದಿಕ್ರಮಃ . . . . . . . . . . . . . 303
೬೨. ಪವಿತ್ರವಿಚಾರಃ . . . . . . . . . . . . . . . 303
೬೩. ಕೂರ್ಚವಿಚಾರಃ . . . . . . . . . . . . . . . 304
೬೪. ಯೋಗ್ಯಾಯೋಗ್ಯದರ್ಭಾಃ . . . . . . . . . . . . 304
೬೫. ಇಧ್ಮವೃಕ್ಷವಿಚಾರಃ . . . . . . . . . . . . . . 305
೬೬. ಬ್ರಹ್ಮಣಃ ವಿಚಾರಃ . . . . . . . . . . . . . . 306
೬೭. ಪೂರ್ಣಪಾತ್ರವಿಚಾರಃ . . . . . . . . . . . . . 306
೬೮. ಹವನಪ್ರಕಾರಃ . . . . . . . . . . . . . . . . 307

೭೯. ಅಗ್ನಿನಾಮಾನಿ ........ 308
೮೦. ಅಗ್ನೇಃ ಜಿಹ್ವಾವಿಚಾರಃ ........ 309
೮೧. ನಿರ್ವಾಪಾದಿವಿಚಾರಃ ........ 310
೮೨. ಅವದಾನಧರ್ಮವಿಚಾರಃ ........ 311
೮೩. ದ್ರವ್ಯಪ್ರಮಾಣವಿಚಾರಃ ........ 311
೮೪. ಆಹುತಿಮುದ್ರಾವಿಚಾರಃ ........ 312
೮೫. ಆಜ್ಯಭಾಗವಿಚಾರಃ ........ 312
೮೬. ಸ್ವಿಷ್ಟಕೃದ್ಧೋಮವಿಚಾರಃ ........ 313
೮೭. ಗ್ರಂಥಿಹೋಮನಿಷೇಧವಿಚಾರಃ ........ 313
೮೮. ಪೂರ್ಣಾಹುತಿವಿಚಾರಃ ........ 313
೮೯. ಆಶೀರ್ವಾದಗದ್ಯಾನಿ ........ 314
೯೦. ವಿಶೇಷಸಂಕಲ್ಪಃ ........ 317
೯೧. ಗೋತ್ರಪ್ರವರಾಣಾಂ ವಿವರಣಮ್ ........ 318
೯೨. ಸ್ಮೃತಿಬಿಂದವಃ ........ 330
೯೩. ಮಂತ್ರಾಕ್ಷತಮಂತ್ರಾಃ ........ 367


# ಮೊದಲ ನುಡಿ

ಬದುಕು ಬಂಗಾರವಾಗಬೇಕೆಂದು ಪ್ರತಿಯೊಬ್ಬರ ಆಸೆ-ಆಕಾಂಕ್ಷೆ ಸಹಜ. ನಶ್ವರವಾಗುವ ಈ ಶರೀರದೊಂದಿಗೆ ಚಂಚಲವಾದ ಮನಸ್ಸನ್ನು ಬುದ್ಧಿಯಿಂದ ತಿದ್ದಿ, ಧಾರ್ಮಿಕ ಕರ್ಮಮಾರ್ಗದ ಚೌಕಟ್ಟಿನಲ್ಲಿ ಆಧ್ಯಾತ್ಮಿಕ ಜ್ಞಾನದಿಂದ ಆತ್ಮವು ಜೀವನದಲ್ಲಿ ತೃಪ್ತಿಪಡುವುದೇ ಬಂಗಾರಬದುಕು. ಲೌಕಿಕ ವ್ಯಾವಹಾರಿಕ ಬುದ್ಧಿವಂತಿಕೆಯಿಂದ ಸಂಪತ್ತು, ಸ್ತ್ರೀ, ಗೃಹಾದಿ ಸುಖಗಳನ್ನು ಪಡೆಯಬಹುದು. ಅವು ಕೇವಲ ತಾತ್ಕಾಲಿಕ ಸುಖಮಯವೆನಿಸಲೂಬಹುದು. ನೈಜ ಸುಖಾನುಭವವಾಗಲು ಧಾರ್ಮಿಕಬುದ್ಧಿಯು ಧರ್ಮಕರ್ಮಗಳ ಮಾರ್ಗವೇ ಮುಖ್ಯವಾಗಿದೆ.

ಅಪೌರುಷೇಯ ವೇದ, ಋಷಿಪ್ರಣೀತ ಸ್ಮೃತಿ, ಸದಾಚಾರ ನಿಷ್ಠೆ, ಆತ್ಮಪ್ರಸನ್ನತೆ -ಹೀಗೆ ನಾಲ್ಕು ಧರ್ಮಮಾರ್ಗದ ಮೂಲಗಳು. ಅನೇಕ ಋಷಿಗಳು ಮುಂದಿನ ಜನಾಂಗವು ಕಾಲಮಾನಗಳಿಗನುಗುಣವಾಗಿ ಧರ್ಮಕರ್ಮಗಳನ್ನು ನಿಜಜೀವನದಲ್ಲಿ ಅನುಷ್ಠಾನಗೈಯುವಂತೆ, ವೇದಶಾಸ್ತ್ರಗಳನ್ನು ಮಥನ-ಮನನ-ಚಿಂತನಮಾಡಿ ಮತ-ಸಂಪ್ರದಾಯ, ದೇಶ-ಕಾಲ ಮೊದಲಾದ ಕಟ್ಟುಪಾಡುಗಳನ್ನು ವಿಧವಿಧವಾಗಿ ರೂಪಿಸಿ ಸಮಗ್ರ ಮಾನವಕುಲಕ್ಕೆ ಸರ್ವಕಾಲದಲ್ಲೂ ಅನುಕೂಲವಾಗುವಂತೆ ಸ್ಮೃತಿಗಳನ್ನು ಬರೆದಿರುವರು. ಸ್ಮೃತಿಗಳ ಆಧಾರದಂತೆ ಸುಲಭಾನುಷ್ಠಾನಗೈಯಲು ಕೆಲವು ಆಚಾರ್ಯರು – ಆಶ್ವಲಾಯನ, ಬೋಧಾಯನ, ಸಾಂಖ್ಯಾಯನ, ಗೋಭಿಲ, ಖಾದಿರ, ಪಾರಸ್ಕರಾದಿ ಗೃಹ್ಯಸೂತ್ರಗಳನ್ನು ರಚಿಸಿರುವರು. ಈ ಗೃಹ್ಯಸೂತ್ರಗಳು ಪರಸ್ಪರ ಭಿನ್ನಭಿನ್ನಗಳಾಗಿ ಕಂಡರೂ ಮೂಲತಃ ದೇಶಕಾಲಮಾನಪ್ರಕಾರ ಆಯಾಯಾ ಮತಾನುಯಾಯಿಗಳಿಗೆ ಅನುಕೂಲವಾಗಿವೆ ಎಂಬುದರಲ್ಲಿ ಸಂದೇಹವಿಲ್ಲ.

ಗೃಹ್ಯಸೂತ್ರಗಳನ್ನು ಆಳವಾಗಿ ಅಭ್ಯಾಸಮಾಡುವರೆ ಗುರುಕುಲವಾಸ, ಅಧ್ಯಯನ, ಅನುಷ್ಠಾನ ಅವಶ್ಯವಾಗಿದೆ. ಇಂದು ಉದರಪೋಷಣೆಗಾಗಿ ಲೌಕಿಕ ಶಿಕ್ಷಣವೇ ಮುಖ್ಯವೆನಿಸಿದೆ. ಇಂದಿನ ವಾತಾವರಣದಲ್ಲಿ ಶಿಕ್ಷಣ ಹಾಗೂ ಉದ್ಯೋಗವು ಸಹಜವಾದರೂ, ಉದ್ಯೋಗದಿಂದ ನಿವೃತ್ತಿಹೊಂದಿದ ಅನಂತರ ಮಾನಸಿಕ ಶಾಂತಿಗಾಗಿ ಆಧ್ಯಾತ್ಮಿಕಜ್ಞಾನದ ಚಿಂತನೆ ಅಗತ್ಯವಾಗಿದೆ. ವಯೋಧರ್ಮದಂತೆ ಇಂದ್ರಿಯಗಳು ನಿಶ್ಶಕ್ತಿಗೊಳ್ಳುವ ಸಮಯದಲ್ಲಿ ಆಧ್ಯಾತ್ಮಿಕಚಿಂತನ, ವ್ಯವಸಾಯ ಮಾಡಲು ಬಹಳ ಪರಿಶ್ರಮಪಡಬೇಕಾಗುವುದು. ಅದಕ್ಕಾಗಿ ಜ್ಞಾನಿಗಳು ತಿಳಿಸಿದಂತೆ ಚಿಕ್ಕಂದಿನಿಂದಲೇ ಮಕ್ಕಳಿಗೆ ಆಧ್ಯಾತ್ಮಿಕದ ಹಿನ್ನೆಲೆಯಲ್ಲೇ ಶಿಕ್ಷಣವನ್ನು ಕೊಡಿಸಬೇಕು. ಮಧ್ಯವಯಸ್ಸಿನಲ್ಲಿ ಲೌಕಿಕಶಿಕ್ಷಣ-ಉದ್ಯೋಗಾದಿಗಳನ್ನು ಮಾಡಿದರೂ, ಎಳೆಪ್ರಾಯದಿಂದ ಅಭ್ಯಾಸಮಾಡಿಕೊಂಡು ಬಂದ ಧಾರ್ಮಿಕದ ಚೌಕಟ್ಟನ್ನು ಮೀರದೆ ಆಚಾರ-ವಿಚಾರ-ಆಹಾರ-ವ್ಯವಹಾರಗಳಲ್ಲಿ ಪರಿಶುದ್ಧತೆಯಿಂದ ಜೀವನವನ್ನು ಸಾರ್ಥಕಗೊಳಿಸುವುದು ಖಂಡಿತ. ಜೀವನ ಸಾರ್ಥಕತೆಗೆ

ಆಧ್ಯಾತ್ಮಿಕಜ್ಞಾನವುಂಟಾಗಲು ಮಗುವಿನ ಜನನದಿಂದಲೇ ಸಂಸ್ಕಾರವಿಧಾನಗಳನ್ನು ಗೃಹ್ಯಸೂತ್ರಗಳು ಉಲ್ಲೇಖಿಸಿವೆ. ಸಂಸ್ಕಾರ = ಪರಿಶುದ್ಧತೆ, ಆತ್ಮ ಹಾಗೂ ಶರೀರಗಳಿಗೆ ಆಯಾಯಾ ಕಾಲದಲ್ಲಿ ನಡೆಸಲಾಗುವ ಕರ್ಮಗಳು. ಆತ್ಮ, ಅಂತಃಕರಣ, ಆಶ್ರಯಿಸಿದ ಶರೀರ ಇವುಗಳಿಗೆ ಮಂತ್ರಪೂರ್ವಕಸಂಸ್ಕಾರಗಳಿಂದ ಸದಾಚಾರಸಂಪನ್ನತೆ, ಮಾನಸಿಕ ಸಮಾಧಾನಗಳ ಶಕ್ತಿಗಳುಂಟಾಗಿ ಸುಸಂಸ್ಕೃತ ಮಾನವನೆಂದಾಗುವನು. ಲೌಕಿಕವಿದ್ಯಾ-ಉದ್ಯೋಗವಂತನಾದರೂ ಇಹ-ಪರಗಳಲ್ಲೂ ಸುಖಿಯಾಗುವನು.

ಇಂದು ಸಮಾಜದಲ್ಲಿ ಕೆಲವೇ ಸಂಸ್ಕಾರಗಳು ಬಳಕೆಯಲ್ಲಿವೆ. ಕೇವಲ ಧಾರ್ಮಿಕ ಮುಖವಾಡದೊಂದಿಗೆ ನಡೆಸಲಾಗುವ ಸಂಸ್ಕಾರ ಕ್ರಿಯೆಗಳಲ್ಲಿ ಮುಖ್ಯಾಂಶವೇ ಶೂನ್ಯವಾಗಿ ವಾದ್ಯ-ಫೋಟೋ-ಧ್ವನಿವರ್ಧಕ ಗದ್ದಲಗಳಲ್ಲಿ ಮುಕ್ತಾಯವಾಗುತ್ತಿದೆ. ಲೌಕಿಕ ಉದ್ಯೋಗದಂತೆ ಪೌರೋಹಿತ್ಯವೂ ವ್ಯಾವಹಾರಿಕವಾಗಿದೆ. ಅಬ್ಬರದ ಆಡಂಬರಗಳು ಕರ್ಮಗಳನ್ನೇ ಕಬಳಿಸುತ್ತಿರುವುದು ವ್ಯಾಪಕವಾಗಿರಲು ಪುರೋಹಿತರೂ ನಿರ್ಲಕ್ಷಿತರಾಗಿರುವುದರಲ್ಲಿ ಆಶ್ಚರ್ಯವೇನಿಲ್ಲ. ಆದರೆ ಪ್ರತಿಯೊಂದು ಸಂದರ್ಭಗಳಿಗೂ ಪುರೋಹಿತರ ಆವಶ್ಯಕತೆ ಮಾತ್ರ ಇದ್ದೇ ಇದೆ. ಪುರೋಹಿತರು ತಮ್ಮ ವೃತ್ತಿಯಲ್ಲಿ ಹೆಚ್ಚಿನ ಆಸೆ-ಅಭಿಲಾಷೆಗಳನ್ನು ಹೊಂದದೆ ಸಂಸ್ಕಾರಗಳ ವಿಶೇಷ ಮಹತ್ವ-ಅಗತ್ಯಗಳನ್ನು ಮನವರಿಕೆ ಮಾಡಿಕೊಂಡು ತಿಳಿಯಪಡಿಸಿದರೆ ಬಹಳಷ್ಟು ಪ್ರಯೋಜನವಾಗಬಹುದು. ಕೇವಲ ಶಾಂತಿ-ಹೋಮ-ಪ್ರಾಯಶ್ಚಿತ್ತಗಳಿಂದೂ; ವ್ರತ, ಪೂಜೆ, ಜಪಗಳಿಂದೂ ಕರ್ಮಭಾಗಗಳನ್ನು ಮಾಡಿಸುವುದು ಮಾತ್ರ ಪೌರೋಹಿತ್ಯದ ಮುಖ್ಯ ಉದ್ದೇಶವಲ್ಲ. ಶಿಷ್ಯವರ್ಗದವರನ್ನು, ಪರಿವಾರದವರನ್ನು ಆಯಾಯ ಕಾಲಕ್ಕೆ ನಡೆಸಬೇಕಾದ ಸಂಸ್ಕಾರಕ್ರಿಯೆಗಳನ್ನು ವಿಧಿವತ್ತಾಗಿ ಮಾಡಿಸಿ ಸುಸಂಸ್ಕೃತರನ್ನಾಗಿಸುವುದೂ ಬಹಳ ಮುಖ್ಯ.

ಈ ಉದ್ದೇಶವನ್ನರಿಸಿ ಸಂಸ್ಕಾರಗಳ ಕಾಲ, ಫಲ, ಮಂತ್ರಾರ್ಥಗಳನ್ನು ದೇಶಾಚಾರ ಸಂಪ್ರದಾಯ ರೂಢಿಯಲ್ಲಿರುವ ಕೆಲವೊಂದು ವಿಶೇಷಗಳನ್ನು ಕ್ರಮವಾಗಿ ಈ ಪುಸ್ತಕದಲ್ಲಿ ವಿವರಿಸಲಾಗಿದೆ. ಸಹೃದಯರ ಆತ್ಮೀಯ ಸಲಹೆಗಳಿಗೆ ಸದಾ ಸ್ವಾಗತವಿದೆ. ಪುರೋಹಿತ ವರ್ಗದ ಬಂಧುಗಳ ಪ್ರೋತ್ಸಾಹಕ್ಕೆ ಚಿರಋಣಿ.



## ಕೃತಜ್ಞತೆಗಳು

೧. ವಾತ್ಸಲ್ಯಪೂರಿತಚಿತ್ತದಿಂದ ಆಶೀರ್ವಾದ ಮಾಡಿದ, ಜನ್ಮದಾತರಾದ ಮಾತಾಪಿತೃಗಳು.

೨. ಪೂಜ್ಯ ಶ್ರೀವಿಶ್ವೇಶತೀರ್ಥಶ್ರೀಪಾದಂಗಳವರು ಪೇಜಾವರ ಮಠ, ನನ್ನನ್ನು ಆತ್ಮೀಯ ಶಿಷ್ಯನನ್ನಾಗಿ ಅನುಗ್ರಹಿಸಿ, ಪಾಜಕಕ್ಷೇತ್ರದ ವಾಸುದೇವ ಗುರುಕುಲದಲ್ಲಿಯೂ ಪಲಿಮಾರು ಮಠದ ಶ್ರೀ ವಿದ್ಯಾಧೀಶತೀರ್ಥಶ್ರೀಪಾದರು, 'ಯೋಗದೀಪಿಕಾ' ಗುರುಕುಲದಲ್ಲಿಯೂ ಪೌರೋಹಿತ್ಯಪಾಠ ಹೇಳುವರೆ ಅವಕಾಶನೀಡಿ, ಈ ಪುಸ್ತಕದ ಆವಶ್ಯಕತೆಯನ್ನು ಸ್ಪಷ್ಟಪಡಿಸಿ, ಸಂಗ್ರಹಸಾಧನೆಗೆ ವಿಶೇಷ ಅನುಗ್ರಹಿಸಿರುವುದು ಸ್ಮರಣಾರ್ಹ.

೩. ನಮ್ಮ ಹಿರಿಯರು ಬರೆದಿಟ್ಟ ತುಳುಲಿಪಿಯ ಕೃತಿಯನ್ನು ಲಿಪ್ಯಂತರಿಸುವಲ್ಲಿ ಉಂಟಾದ ಹಲವಾರು ತಪ್ಪುಗಳನ್ನು ತಿದ್ದಿ, ಸಮಯೋಚಿತ ಸೂಕ್ತ ಸಲಹೆಯನ್ನು ನೀಡಿ ಸಹಕರಿಸಿದವರು ಉಡುಪಿ ವಿದ್ವಾನ್ ಶ್ರೀರಾಮನಾಥಾಚಾರ್ಯರು.

೪. ವೇದೋಕ್ತಮಂತ್ರಗಳೂ, ಪುರಾಣಶ್ಲೋಕಗಳೂ ಪ್ರಸಿದ್ಧವಾದವುಗಳಾದರೂ, ಕ್ರಿಯಾಭಾಗವಿಧಾನಗಳನ್ನು ಬರೆಯುವರೆ ಪೂರ್ಣ ಸಹಕಾರ ನೀಡಿದವರು ಪಲಿಮಾರು ಶ್ರೀ ಪಿ. ವೆಂಕಟ್ರಮಣ ಐತಾಳರು.

೫. ಪ್ರಯೋಗಮಂತ್ರದ ಭಾವಾರ್ಥಗಳನ್ನು ಮನಮುಟ್ಟುವಂತೆ, ಸಿದ್ಧಾಂತಕ್ಕೆ ಅವಿರೋಧವಾಗಿ ಬರೆದವರು ಕಾರ್ಕಳ ಶ್ರೀ. ಪಂ. ಗೋಪಾಲಕೃಷ್ಣಾಚಾರ್ಯರು.

೬. ಈ ಗ್ರಂಥವನ್ನು ಆಮೂಲಾಗ್ರವಾಗಿ ಪರಿಶೋಧಿಸಿ ಸಹಕರಿಸಿದ ವಿದ್ವಾನ್ ಶ್ರೀ ಪಿ. ಲಕ್ಷ್ಮೀನಾರಾಯಣ ಶರ್ಮಾ, ಪ್ರಾಂಶುಪಾಲರು, ಶ್ರೀಮನ್ಮಧ್ವಸಿದ್ಧಾಂತ ಪ್ರಬೋಧಿನೀ ಸಂಸ್ಕೃತ ಮಹಾಪಾಠಶಾಲಾ, ಉಡುಪಿ.

೭. ಪ್ರಕಟನೆಗೆ ಹೆಚ್ಚು ಪ್ರೋತ್ಸಾಹ, ಹೊಣೆಗಾರಿಕೆಯನ್ನು ಹೊತ್ತವರು, ಉಡುಪಿ ರಥಬೀದಿಯ ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯದ ಮಾಲಿಕರಾದ ಶ್ರೀ ರಮೇಶ ಭಟ್ಟರು.

೫. ಸುಂದರವಾಗಿ ಅಕ್ಷರಸಂಯೋಜಿಸಿ ಜನಾದರಣೀಯವಾಗುವಂತೆ ಪ್ರಯತ್ನಿಸಿದ 'ನವದುರ್ಗಾ ಲೇಸರ್‌ಟೆಕ್'ನ ಡಾ॥ ಕೆ. ಪದ್ಮನಾಭ ಕೇಕುಣ್ಣಾಯರು ಹಾಗೂ ಅಂದವಾಗಿ ಮುದ್ರಿಸಿದ ಮಣಿಪಾಲ ಪವರ್ ಪ್ರೆಸ್‌ನವರು.

೬. ಪ್ರತ್ಯಕ್ಷವಾಗಿ-ಪರೋಕ್ಷವಾಗಿ ಶುಭಹಾರೈಸುವ ಆಸ್ತಿಕಬಂಧುಗಳು.

ಇವರೆಲ್ಲರಿಗೂ ಹಾರ್ದಿಕ ಕೃತಜ್ಞತೆಗಳು.

೭-೧-೨೦೦೦ **ಚಿತ್ರಾಪುರ ಗೋಪಾಲಕೃಷ್ಣ ಆಚಾರ್ಯ**

ಕುಳ್ಯಾ-574 196, ದ.ಕ

**(ಪ್ರಥಮ ಮುದ್ರಣದಿಂದ)**



# ಸಂಸ್ಕಾರಗಳ ಪ್ರಸ್ತಾವನೆ

## ಪುನಃಸಂಧಾನ

ದ್ವಿಜನೆನಿಸಿ ಬ್ರಹ್ಮಚಾರಿಯು ನಿತ್ಯ ಪ್ರಾತಃ-ಸಾಯಂಕಾಲಗಳಲ್ಲಿ ಸಮುದ್ಭವನಾಮಕ ಅಗ್ನಿಯ ಉಪಾಸನೆಯನ್ನೂ ಸ್ನಾತಕವ್ರತಸ್ಥನಾಗಲು ಸೂರ್ಯನಾಮ ಅಗ್ನಿಯ ಆರಾಧನೆಯನ್ನೂ ಗೃಹಸ್ಥನಾಗಲು ಯೋಜಕನಾಮ ಗೃಹ್ಯಾಗ್ನಿಯ ಉಪಾಸನೆಯನ್ನೂ ಸಾಯಂ-ಪ್ರಾತಃಕಾಲಗಳಲ್ಲೂ ಮಾಡುತ್ತಾ, ತನ್ನ ಶರೀರಾಂತಪರ್ಯಂತವೂ ಬಿಡುವಂತಿಲ್ಲ. ವಿಸ್ತಾರವಾಗಿ ನಡೆಸಲು ಅಸಾಧ್ಯವೆನಿಸಿದರೂ "ಆಜ್ಯೇನ ಪಯೇನ ವಾ" ಎಂದು ಸ್ಮೃತಿ ಉಲ್ಲೇಖಿಸಿದಂತೆಯಾದರೂ ನಡೆಸಲೇಬೇಕು. ಔಪಾಸನ ನಡೆಸದೆ ಇದ್ದರೆ ತನಗಾಗಲೀ ಮಕ್ಕಳಿಗಾಗಲೀ ಸಂಸ್ಕಾರಾದಿಗಳನ್ನು ಮಾಡುವರೆ ಅರ್ಹತೆ ಇರುವುದಿಲ್ಲ. ಅನಿವಾರ್ಯ ಸಂದರ್ಭದಲ್ಲಿ ಗೃಹ್ಯಾಗ್ನಿವಿಚ್ಛೇದನವಾಗಿರಲು ಪುನಃಸಂಧಾನ ವಿಧಾನದಿಂದ ಅಗ್ನಿಯನ್ನು ಸಂಪಾದಿಸಬೇಕು.

## ಗರ್ಭಾಧಾನ

ದಂಪತಿಗಳು ಅಭ್ಯಂಗಸ್ನಾನಮಾಡಿ ನೂತನವಸ್ತ್ರಗಳನ್ನು ಧರಿಸಿ ಕುಲದೇವತೆಯನ್ನೂ ಇಷ್ಟದೇವತೆಯನ್ನೂ ನಮಸ್ಕರಿಸಿ, ಗುರುಹಿರಿಯರಿಂದ ಆಶೀರ್ವಾದ ಪಡೆದು, ಬ್ರಾಹ್ಮಣರಿಂದಲೂ ಕುಲಪುರೋಹಿತರಿಂದಲೂ ಕೂಡಿಕೊಂಡು ಕರ್ಮ ಪ್ರಾರಂಭಿಸುವುದು. ಪತ್ನಿಯನ್ನು ದಕ್ಷಿಣ ಭಾಗದಲ್ಲಿ ಕುಳ್ಳಿರಿಸಿ ಪುಣ್ಯಾಹವಾಚನ, ನಾಂದೀಶ್ರಾದ್ಧಾದಿಗಳನ್ನು ಮುಗಿಸಿ ಗರ್ಭಾಧಾನಸಂಸ್ಕಾರ ಪ್ರಯುಕ್ತ ಸಂಕಲ್ಪಮಾಡುವುದು. ಹೋಮವನ್ನು ತಾನೇ ಮಾಡುವುದು ಉತ್ತಮ. ವಿವಾಹವಾದ ಅನಂತರ ನಿತ್ಯ ಔಪಾಸನ ಮಾಡಿಕೊಂಡುಬಾರದೆ ಇದ್ದಲ್ಲಿ ಪುನಃಸಂಧಾನಪೂರ್ವಕ ಗರ್ಭಾಧಾನಹೋಮ ಮಾಡಬೇಕು. ಅಶಕ್ತನಾದಲ್ಲಿ ಕುಲಪುರೋಹಿತರಿಂದ ಮಾಡಿಸುವುದು. ಸ್ಥಂಡಿಲೋಲ್ಲೇಖನಾದಿ "ಮರುತ್"ನಾಮ ಅಗ್ನಿಯನ್ನು ಪ್ರತಿಷ್ಠಾಪಿಸಿ, ಅನ್ವಾಧಾನ ಮಾಡುವುದು. ಪ್ರಜಾಪತಿಗೆ ಚರುವಿನ ಒಂದು ಆಹುತಿ, ಅನಂತರ ವಿಷ್ಣುವಿಗೆ ಆರು, ಪುನಃ ಪ್ರಜಾಪತಿಗೆ ಒಂದು – ಹೀಗೆ ಏಳು ಆಜ್ಯಾಹುತಿಗಳೂ, ಮಧ್ಯೆ ಗೃಹ್ಯೋಕ್ತವಿಧಾನಗಳಿಂದೊಡಗೂಡಿದಂತೆ ಸ್ಥಾಲೀಪಾಕವಿಧಿಯಲ್ಲಿ ಕ್ರಮ ಮುಂದುವರಿಸಿ – ಅದೇ ಅಗ್ನಿಯಲ್ಲಿ ಚರುವನ್ನು ಬೇಯಿಸಿ, ಅವದಾನಧರ್ಮದಿಂದ ಪ್ರಜಾಪತಿಗೆ ನಾಮಮಂತ್ರದಿಂದ ಹೋಮಿಸಿ, ಅನಂತರ ವಿಷ್ಣುವಿಗೂ ಪ್ರಜಾಪತಿಗೂ ಆಜ್ಯಾಹುತಿಗಳನ್ನು ತತ್ತನ್ಮಂತ್ರಗಳಿಂದ ಕೊಡಬೇಕು. ಅನಂತರ ಪಾಪಪರಿಹಾರಕವಾದ ಎಂಟು ಮಂತ್ರಗಳಿಂದ ಪತ್ನಿಯ ತಲೆಯನ್ನು ದಕ್ಷಿಣಪಾಣಿಯಿಂದ ಪೂರ್ವಕ್ಕೆ ಬೆರಳತುದಿಗಳಿರುವಂತೆ

ಸ್ಪರ್ಶಿಸಬೇಕು. ಕೈತೊಳೆದು ಒಂದು ಮಂತ್ರದಿಂದ ಓಷಧಿದೇವತೆಯನ್ನು ಜಪಿಸುವುದು. ಬಳಿಕ ಎಂಟು ಮಂತ್ರಗಳಿಂದ ಅಗ್ನಿಯನ್ನೂ ಐದು ಮಂತ್ರಗಳಿಂದ ಸೂರ್ಯನನ್ನೂ ಉಪಸ್ಥಾನ (ಸೇವನೆ) ಮಾಡುವುದು. ಅನಂತರ ಅಶ್ವಗಂಧದ ಬದಲಿಗೆ ದೂರ್ವಾಂಕುರದ ರಸವನ್ನು ವಸ್ತ್ರದಲ್ಲಿ ಹಿಂಡುತ್ತಾ ಪತ್ನಿಯ ಬಲಮೂಗಿನಲ್ಲಿ ಸಮಂತ್ರಕವಾಗಿ ಸುರಿಯಬೇಕು. ಆಕೆಯು ಶ್ವಾಸ ಎಳೆಕೊಳ್ಳುವುದರಿಂದ ಉದರಕ್ಕೆ ಸೇರುವುದು. ಅನಂತರ ಅಮಂತ್ರಕವಾಗಿ ಆಚಮನ ಮಾಡಿಸಿ ಸ್ವಿಷ್ಟಕೃದಾದಿ ಹೋಮಶೇಷವನ್ನು ಪೂರೈಸುವುದು. ತದಂಗವಾಗಿ ಕಲಶಗ್ರಹಣ ಕರ್ಮ ಮಾಡುವುದು. ಕಲಶಗ್ರಹಣವನ್ನು ಆಧಾನಸಂಸ್ಕಾರಕ್ಕಿಂತ ಮೊದಲು ಮಾಡಿ ಪತ್ನಿಯು ಶುದ್ಧಗೊಳಿಸಿದ ಅಕ್ಕಿಯಿಂದ ಔಪಾಸನ ಮಾಡಿ ಅನಂತರ ಸಂಸ್ಕಾರ ನಡೆಸಬೇಕೆಂದು ಕೆಲವರ ಮತ. ವಿಹಿತವೂ ಆಗಿದೆ.

## ಕಲಶಗ್ರಹಣ

ಎರಡು ಕಲಶಗಳನ್ನು ಸ್ಥಾಪಿಸಿ ವರುಣ-ಸವಿತೃದೇವತೆಗಳನ್ನು ಆವಾಹಿಸಿ ಷೋಡಶೋಪಚಾರಗಳಿಂದ ಪೂಜಿಸುವುದು. ಪತ್ನಿಯು ಪತಿಗಭಿಮುಖವಾಗಿ ಪೂರ್ವದಲ್ಲಿ ಕುಳಿತುಕೊಳ್ಳುವುದು. ದಂಪತಿಗಳು ಎಡದ ಕೈಯಲ್ಲಿ ೫ ತಾಂಬೂಲ ಒಂದು ಅಡಕೆ ಹಿಡಿದುಕೊಂಡು ಬಲದ ಕೈಯಲ್ಲಿ ಅಕ್ಷತೆಗಳಿಂದ ಕಲಶಕ್ಕೆ ೫ ಪ್ರಜಾಪತಿ ಮಂತ್ರಗಳಿಂದ ಪೂಜಿಸುವುದು. ಪತಿಯು ಸಮಂತ್ರಕವಾಗಿ ಉತ್ತರಕಲಶವನ್ನು ಎತ್ತಿ ಪತ್ನಿಯ ಕೈಯಲ್ಲಿ ಕೊಡುವುದು. ಪುನಃ ಜೊತೆಯಾಗಿ ಯಥಾಸ್ಥಾನದಲ್ಲಿಟ್ಟು ಪೂಜಿಸಬೇಕು. ಹೀಗೆ ಒಟ್ಟು ಮೂರು ಸಾರಿ ಆಗಬೇಕು. ಮೂರನೇ ಸಲ ಕಲಶವನ್ನು ಹಿಡಿದುಕೊಂಡು ಆಕೆಯು ನಿಂತು ಕೊಂಡು ಪ್ರದಕ್ಷಿಣೆಯಾಗಿ ಒಂದು ಸುತ್ತುವರಿದು ಕಲಶೋದಕವನ್ನು ಪತಿಗೆ ಪ್ರೋಕ್ಷಿಸಿ ತಾನೂ ಪ್ರೋಕ್ಷಿಸಿಕೊಳ್ಳಬೇಕು. ಇಬ್ಬರೂ ಕಲಶವನ್ನು ಯಥಾಸ್ಥಾನದಲ್ಲಿಟ್ಟು ಪತ್ನಿಯು ಗೆರಸೆಯಲ್ಲಿ ಅಕ್ಕಿಹಾಕಿ ಪೂರ್ವಾದಿ ನಾಲ್ಕು ದಿಕ್ಕುಗಳಿಗೆ ಮುಖಮಾಡಿ ಗೇರುವುದು. ತಮ್ಮ ಕೈಯಲ್ಲಿರುವ ತಾಂಬೂಲ-ಫಲವನ್ನು ಪರಸ್ಪರ ವಿನಿಮಯ ಮಾಡಿಕೊಂಡು ಪತ್ನಿಯು ಪತಿಗೆ ನಮಸ್ಕರಿಸಿ ದಕ್ಷಿಣದಲ್ಲಿ ಪೂರ್ವದಂತೆ ಕುಳಿತುಕೊಳ್ಳುವುದು. ಉತ್ತರಪೂಜಾಪೂರ್ವಕ ಕಲಶದೇವತೆಗಳನ್ನು ಉದ್ವಾಸನೆ ಮಾಡಿ ಬ್ರಾಹ್ಮಣರನ್ನು ತಾಂಬೂಲ-ಫಲ-ಭೋಜನ ದಕ್ಷಿಣಾದಿಗಳಿಂದ ಸಂತೋಷಪಡಿಸಿ ಆಶೀರ್ವಾದ ಪಡೆದುಕೊಳ್ಳುವುದು.

ರಾತ್ರಿ ಆಹಾರ ಜೀರ್ಣವಾಗಲು ಎರಡನೇ ಯಾಮದಲ್ಲಿ ದಂಪತಿಗಳು ಪ್ರಸನ್ನಮನಸ್ಸುಳ್ಳವರಾಗಿ, ಮಧ್ಯಾಹ್ನ ಆರಾಧಿಸಿದ ದೇವತೆಗಳನ್ನು ಸ್ಮರಿಸಿಕೊಂಡು ಸಮಾಗಮ ಮಾಡಬೇಕು.

ಇಲ್ಲಿಗೆ ಗರ್ಭಾಧಾನಪ್ರಯೋಗವು ಮುಗಿಯುವುದು.



## ಪುಂಸವನ-ಅನವಲೋಭನ-ಸೀಮಂತ-ವಿಷ್ಣುಬಲಿ ಸಂಸ್ಕಾರಗಳು

ಪತ್ನಿಯು ಗರ್ಭಧರಿಸಿದ ಮೂರನೇ ಮಾಸದಲ್ಲಿ ಪುಂಸವನ-ಅನವಲೋಭನ ಸಂಸ್ಕಾರ ನಡೆಸಬೇಕು. ಇಂದು ಹೆಚ್ಚಾಗಿ ಸೀಮಂತ ದಿನವೇ ನಡೆಸುವುದು ಬಳಕೆಯಾಗಿದೆ. ಪುಂಸವನ-ಅನವಲೋಭನ, ಸೀಮಂತ ಹಾಗೂ ವಿಷ್ಣುಬಲಿಯೆಂಬ ಸಂಸ್ಕಾರವನ್ನು ತಂತ್ರೇಣ ನಡೆಸುವಲ್ಲಿ ಪುಣ್ಯಾಹವಾಚನ ಮಾಡಿ-ನಾಂದೀಶ್ರಾದ್ಧ ಸಂದರ್ಭ "ಕ್ರತುದಕ್ಷ"ರೆಂಬ ವಿಶ್ವೇದೇವತೆ ಪುರಸ್ಸರ ಶ್ರಾದ್ಧಮಾಡಿ, ಮಂಗಲನಾಮಾಗ್ನಿಯನ್ನು ಪ್ರತಿಷ್ಠಾಪಿಸಿ, ಅನ್ವಾಧಾನ ಮಾಡುವುದು. ಪ್ರಜಾಪತಿಗೆ ಒಂದು ಚರು ಆಹುತಿ, ಹಾಗೂ ಧಾತೃದೇವತೆಗೆ ಎರಡು ಆಹುತಿ, ರಾಕಾದೇವತೆಗೆ ಎರಡು, ವಿಷ್ಣುವಿಗೆ ಮೂರು, ಪ್ರಜಾಪತಿಗೆ ಒಂದು ಆಜ್ಯಾಹುತಿಗಳೆಂದೂ, ಮಧ್ಯೇ ದಧಿಪ್ರಾಶನ, ರಸಸೇಚನ, ಸೀಮಂತೋನ್ನಯನಾದಿ ಗೃಹ್ಯೋಕ್ತವಿಧಿಗಳು ಗಮನಾರ್ಹ. ನಿರ್ವಾಪ ಮಾಡಿ ಚರು ಸಿದ್ಧಗೊಳಿಸುವುದು. ಪತಿಯು ಪತ್ನಿಯ ಬಲದ ಕೈಯನ್ನು ಶುದ್ಧಗೊಳಿಸಿ, ತುಂಬ ಮೊಸರು ಹಾಕಿ ಮಧ್ಯದಲ್ಲಿ ಖಂಡವಾಗದ ಯವೆ (ಜವೆಗೋಧಿ) ಅಥವಾ ಅಕ್ಕಿ ಒಂದನ್ನೂ ಪಾರ್ಶ್ವಗಳಲ್ಲಿ ಪುಷ್ಟವಾದ ಎರಡು ಉದ್ದಿನ ಕಾಳುಗಳನ್ನೂ ಇಟ್ಟು ಪ್ರಾಶನ ಮಾಡಿಸಬೇಕು. ಹೀಗೆ ಮೂರು ಸಾರಿ ಪ್ರಾಶನ ಮಾಡಿಸುವುದು. ಪ್ರತಿಸಲವೂ ಆಚಮನ ಮಾಡಿಸಬೇಕು. ಅನಂತರ ಒಬ್ಬ ಕನ್ನಿಕೆಯಿಂದ ಅಥವಾ ವಧುವಿನಿಂದಲೇ ಗರಿಕೆಯನ್ನು ರಸಬರುವಂತೆ ಜಜ್ಜಿಸಿ, ಶುದ್ಧವಸ್ತ್ರದಂಚಿನಲ್ಲಿರಿಸಿ, ಪ್ರಜಾವದಾಖ್ಯ- ಜೀವಪುತ್ರಾಖ್ಯ ಸೂಕ್ತಗಳೆರಡನ್ನು ಜಪಿಸಿ, ಪತಿಯು ಪತ್ನಿಯ ಹಿಂಬದಿ ನಿಂತು ಎಡಗೈಯಿಂದ ಆಕೆಯ ಗಲ್ಲಕ್ಕೆ ಮೇಲ್ಮುಖಿಯನ್ನಾಗಿ ಮಾಡಿ ಬಲಮೂಗಿನ ಬಿಲದಲ್ಲಿ ದೂರ್ವಾರಸವನ್ನು ಸಿಂಚನಮಾಡಬೇಕು. ಅನಂತರ ಪತ್ನಿಯು ಆಚಮನ ಮಾಡುವುದು. ಅವದಾನಧರ್ಮದಿಂದ ಚರುಹೋಮ ಮಾಡಿ ಪತ್ನಿಯ ಹೃದಯವನ್ನು ಮುಟ್ಟಬೇಕು.

ಅನಂತರ ಸೀಮಂತದ ಅಂಗವಾಗಿ ಪ್ರಧಾನಾಜ್ಯಾಹುತಿ ಕೊಡುವುದು. ಸೀಮಂತೋನ್ನಯನ ಲಗ್ನ ಸುಲಗ್ನತಾಸಿದ್ಧಿಗೋಸ್ಕರ ಬ್ರಾಹ್ಮಣರಿಗೆ ತಾಂಬೂಲಫಲ ಕೊಡಬೇಕು. ಗರ್ಭಿಣಿಯೂ ಕೂಡ ಸುವಾಸಿನಿಯರಿಗೆ ಫಲದಾನ ಕೊಡಬೇಕು. ವಿಪ್ರರು ಮಂಗಲಾಷ್ಟಕವನ್ನು ಪಠಿಸುತ್ತಿರಲು ಶುಭಮುಹೂರ್ತದಲ್ಲಿ ಪತಿಯು ಕಾಯಿಗಳೆರಡರಿಂದ ಕೂಡಿದ ಅತ್ತಿಗುಚ್ಛ, ಮೂರು ಬಿಳಿಬಣ್ಣವುಳ್ಳ ಶಲಲೀ (ಹಂದಿಕಣೆ), ಮೂರು ಎಸಳು ಪ್ರಾದೇಶಮಾತ್ರದ ಅಗ್ರದರ್ಭೆಗಳನ್ನು ಜೊತೆಯಾಗಿ ಪತ್ನಿಯ ಪಶ್ಚಿಮ ಯಾ ಉತ್ತರ ಮುಖವಾಗಿ ದಕ್ಷಿಣದಲ್ಲಿ ನಿಂತುಕೊಂಡು ವ್ಯಾಹೃತಿಮಂತ್ರದಿಂದ ಆಕೆಯ ತಲೆಕೂದಲು-ಲಲಾಟ ಇವುಗಳ ಸಂಧಿಯ ಮಧ್ಯಭಾಗ ಬೈತಲೆಯಿಂದ ಮೇಲಕ್ಕೆ ಮೂರು ನಾಲ್ಕು ಸಲ ಗುರುತಿಸಬೇಕು. ದೇಶಾಚಾರದಂತೆ ಉನ್ನಯನ ಕ್ರಮ ಹೀಗಿದೆ: ಇಡಿ ಅಡಕೆ ಎರಡನ್ನು ಹಂದಿಕಣೆಯೊಂದಿಗೆ ಸಂಯೋಜನಮಾಡಿ, ಚಿಕ್ಕ ಅತ್ತಿಗೊಂಚಲು ಶೃಂಗಾರ ಹೂ, ಇತರ ಐದು-ಏಳು ಬಗೆಯ ಬಣ್ಣಬಣ್ಣದ ಸಾತ್ವಿಕವಾದ ಸುವಾಸನೆಯುಳ್ಳ ಹೂಗಳನ್ನು ಒಟ್ಟುಜೋಡಿಸಿ ಕಿರೀಟದಂತೆ ನೂಲಿನಿಂದ ಪೋಣಿಸಿ, ಅದನ್ನು ಪ್ರೋಕ್ಷಿಸಿ ಶುದ್ಧಗೊಳಿಸಿ ಲಕ್ಷ್ಮಿಯನ್ನು

ಆವಾಹಿಸಿ ಶ್ರೀಸೂಕ್ತದಿಂದ ಪೂಜಿಸಿ, ಸುಮುಹೂರ್ತಕಾಲದಲ್ಲಿ ಲಕ್ಷ್ಮೀಸನ್ನಿಧಾನದ ಆ ಹೂವಿನ ಮಕುಟವನ್ನು ಪತಿಯು ದರ್ಭಾಂಕುರ ತ್ರಯಗಳಿಂದ ಉನ್ನಯನ ಮಾಡಿ ಸುವಾಸಿನಿಯರ ಸಹಾಯದೊಂದಿಗೆ ಪತ್ನಿಯ ನಡುನೆತ್ತಿಯಲ್ಲಿ ಕಟ್ಟಬೇಕು. ಹಾಗೂ ಆಕೆಯ ಮಡಿಲಿಗೆ ಐದು ವಿಧದ ಸಾತ್ವಿಕ ಹಣ್ಣುಗಳನ್ನು ಅಕ್ಕಿ ಸಹಿತ ಹಾಕಿ ಉಡಿ ತುಂಬಬೇಕು. ಇವಿಷ್ಟು ಆಚಾರವಿಶೇಷ. 



ಆ ಸಮಯದಲ್ಲಿ ವೀಣಾವಾದ್ಯಸಹಿತವಾಗಿ ವಿಪ್ರರಿಂದ ಸಾಮಗಾನ ಮಾಡಿಸುವುದು ಅಥವಾ ತತ್ಸಂಬಂಧ ಮಂತ್ರವನ್ನಾದರೂ ಮೂರು ಸಲ ಹೇಳಿಸುವುದು. ಅನಂತರ ಹೋಮಶೇಷವನ್ನು ಮುಕ್ತಾಯಗೊಳಿಸಿ ಪತಿಪುತ್ರವತೀ ಸ್ತ್ರೀಯರು ದಂಪತಿಗಳಿಗೆ ನೀರಾಜನ ಮಾಡಬೇಕು. ಆಚಾರವಿಶೇಷದಂತೆ ತಲೆಯಲ್ಲಿಟ್ಟ ಹೂಕಿರೀಟವನ್ನು ಪತಿಯು ತೆಗೆದು, ಅಡಕೆಯನ್ನು ಪತ್ನಿಯ ಕೈಯಲ್ಲಿ ಕೊಟ್ಟು, ಹಂದಿಕಣೆಯನ್ನು ದೂರ ಬಿಸಾಡಿ, ಹೂಗಳನ್ನು ಕ್ಷೀರವೃಕ್ಷಕ್ಕೆ ಕಟ್ಟಬೇಕು. ಆಕೆಯು ಅಡಕೆಗಳೆರಡನ್ನು ಶುದ್ಧ ಮಣ್ಣಿನಲ್ಲಿ ನೆಡಬೇಕು.

ಪುನಃ ಸಂಕಲ್ಪಪೂರ್ವಕ ಈಶಾನ್ಯ ಭಾಗದಲ್ಲಿ ಕಲಶ ಸ್ಥಾಪಿಸಿ ವಿಷ್ಣುವನ್ನು ಆವಾಹನೆಮಾಡಿ ಕಜ್ಜಾಯ-ಚಕ್ಕುಲೀ ಅಪೂಪಾದಿಗಳನ್ನು ನೈವೇದ್ಯ ಮಾಡಬೇಕು. ಕಲಶದ ಪಶ್ಚಿಮದಲ್ಲಿ ಚತುರಸ್ರಮಂಡಲ ಮಾಡಿ ಪೂರ್ವ-ಪಶ್ಚಿಮ ದಕ್ಷಿಣೋತ್ತರವಾಗಿ ೯ x ೯ ರೇಖೆಗಳನ್ನು ರಂಗವಲ್ಲಿಯಿಂದ ಬರೆದು ಅರುವತ್ತನಾಲ್ಕು ಕೋಣೆಗಳ ಮಂಡಲ ಸಿದ್ಧಗೊಳಿಸುವುದು. ನೈಋತ್ಯ ಕೋಣೆಯಿಂದ ಪ್ರದಕ್ಷಿಣೆಯಾಗಿ ಹೊರಗಿನ ಸುತ್ತಿನಲ್ಲೂ ಅಂತೆಯೇ ಒಳಗಿನ ವೃತ್ತದಲ್ಲೂ ಅರಳಿಂದ ವಿಷ್ಣುಮಂತ್ರದಿಂದ ಬಲಿಕೊಟ್ಟು, ಅನಂತರ ಉತ್ತರಪೂಜಾಪೂರ್ವಕ ಕರ್ಮ ಮುಕ್ತಾಯಗೊಳಿಸಿ ಕಲಶೋದಕದಿಂದ ಮಾರ್ಜನಮಾಡಿಸಿಕೊಳ್ಳುವುದು.

ಇಲ್ಲಿಗೆ ಪುಂಸವನ-ಅನವಲೋಭನ-ಸೀಮಂತ-ವಿಷ್ಣುಬಲಿ ಸಂಸ್ಕಾರಗಳು ಮುಗಿಯುವುದು.

## ಜಾತಕರ್ಮ ಪ್ರಯೋಗ

ಜಾತಕರ್ಮಸಂಸ್ಕಾರವನ್ನು ಶಿಶು ಹುಟ್ಟಿದಾಕ್ಷಣದಲ್ಲೇ ಮಾಡಬೇಕೆಂದಿದ್ದರೂ ಇಂದಿನ ಲೋಕಾಚಾರ ಪ್ರಕಾರ ಹನ್ನೊಂದನೇ ಯಾ ಹನ್ನೆರಡನೇ ದಿನ ನಾಮಕರಣ ಜೊತೆಗೆ ಆಚರಿಸುವುದು ಬಳಕೆಯಾಗಿದೆ. ಜನನಾತ್ ಹದಿನೆಂಟನೇ ದಿನ ಹಾಗೂ ಮೂರು ತಿಂಗಳೊಳಗೂ ಮಾಡಬಹುದೆಂದಿದೆ. ಆದರೆ ಸಂಸ್ಕಾರಾದಿಗಳಿಗೆ ಯುಕ್ತಕಾಲವೆಂದಾಗಿದ್ದರೂ ಅಮಾವಾಸ್ಯೆ ಸಂಕ್ರಾಂತಿ ವಿಷ್ಟ್ಯಾದಿ(ನಿಷಿದ್ಧ)ತಿಥಿಗಳಲ್ಲಿ ಮಾಡ ಬಾರದೆಂದೂ ವಚನವಿದೆ. ಆ ದಿನ ಪಂಚಗವ್ಯಪ್ರಾಶನ, ಉಪವೀತಧಾರಣೆ ಮಾಡಿಕೊಂಡು ಪುಣ್ಯಾಹವಾಚನ-ಆಭ್ಯುದಯಿಕ ಶ್ರಾದ್ಧಾದಿ ಗಳನ್ನು ಮುಗಿಸಿ ಪತ್ನಿಯ ತಾತ್ಕಾಲಿಕ ಮೈಶುದ್ಧಿಗಾಗಿ ಕಲಶಗ್ರಹಣವಿಧಿ ನಡೆಸುವುದು. ಬಾಣಂತಿಗೆ ಗಂಡುಮಗುವಾಗಿದ್ದರೆ ೨೦ ದಿನಗಳ

ತನಕವೂ ಹೆಣ್ಣುಶಿಶುವಾಗಿದ್ದರೆ ಒಂದು ತಿಂಗಳ ತನಕವೂ ಸಾಮಾನ್ಯ ಆಶೌಚವಿದೆಯೆಂದು ಸ್ಮೃತಿ ಇದೆ. ಜಾತಕರ್ಮ ನಾಮಕರಣ ಸಂಸ್ಕಾರವು ಶಿಶುವಿಗೆ ಆದುದರಿಂದ ದೋಷವೆನಿಸುವುದಿಲ್ಲ. ಅನಂತರ ಸ್ವಚ್ಛವಾದ ಶಿಲಾತಲದಲ್ಲಿ ಸಮಪ್ರಮಾಣವಾಗದಂತೆ ಜೇನು-ತುಪ್ಪ (ಬೆಣ್ಣೆ) ಬೆರಸಿ ಬಜೆಬೇರನ್ನು ಜೊತೆಯಾಗಿ ತೇದು, ಅದರೊಂದಿಗೆ ಸುವರ್ಣವನ್ನು ತಿಕ್ಕಿ, ಸುವರ್ಣದಿಂದಲೇ ಶಿಶುವಿಗೆ ಪ್ರಾಶನ ಮಾಡಿಸುವುದು. ಆ ಸುವರ್ಣವನ್ನು ತೊಳೆದು ಶಿಶುವಿನ ಬಲ-ಎಡ ಕಿವಿಗಳಿಗೆ ಸ್ಪರ್ಶಮಾಡುವುದು. ಶಿಶುವಿನ ಎರಡು ಭುಜಗಳನ್ನು ಸ್ಪರ್ಶಿಸುವುದು. ಸೊಂಟಕ್ಕೆ ಎಕ್ಕೆಗಿಡದ ಸೂತ್ರವನ್ನು ರಕ್ಷೆಗಾಗಿ ನೂಲಿನಂತೆ ಕಟ್ಟುವುದು. ಶಿಶುವಿನ ನೆತ್ತಿಯನ್ನು ಆಘ್ರಾಣಿಸುವುದು. ತಾಯಿಯಿಂದ ಶಿಶುವಿಗೆ ಸ್ತನ್ಯಪಾನ ಮಾಡಿಸುವುದು. ಇಲ್ಲಿಗೆ ಜಾತಕರ್ಮ ಮುಗಿಯುವುದು. ಹೆಣ್ಣು ಶಿಶುವಿಗೆ ಮೇಲೆ ತಿಳಿಸಿದ ಎಲ್ಲ ವಿಧಿಯನ್ನು ಅಮಂತ್ರಕವಾಗಿ ಮಾಡಬೇಕೆಂದು ಋಷಿವಚನ. 



ಪುನಃ ಸಂಕಲ್ಪಪೂರ್ವಕ ನಾಮಕರಣ – ಒಂದು ಹರಿವಾಣದಲ್ಲಿ ಅಕ್ಕಿಯನ್ನು ಹರಡಿ ಸುವರ್ಣಕಡ್ಡಿ(ಹಳದಿಬೇರು)ಯಿಂದ ಮೊದಲು ಕುಲದೇವತಾ ಹೆಸರು ಅನಂತರ ಮಾಸನಾಮ-ನಕ್ಷತ್ರನಾಮ ದೇವತೆಗಳ ಹೆಸರು ನಾಲ್ಕನೆಯದ್ದಾಗಿ ವ್ಯವಹಾರಯೋಗ್ಯವಾದ ಹೆಸರನ್ನು ಬರೆದು ಪ್ರತಿಷ್ಠಾಮಂತ್ರ ಜಪಿಸಿ ಷೋಡಶೋಪಚಾರಪೂಜೆ ಮಾಡುವುದು. ನಾಮಕರಣಲಗ್ನ ಶುಭವಾಗಲು ಬ್ರಾಹ್ಮಣರಿಗೆ ತಾಂಬೂಲ ದಕ್ಷಿಣೆ ಕೊಟ್ಟು, ಬರೆದ ದೇವತೆಗಳ ಹೆಸರಿನೊಂದಿಗೆ ಭಕ್ತನಾಗಿರುವೆ ಎಂದು ಶಿಶುವಿನ ಬಲದ ಕಿವಿಯಲ್ಲಿ ಮೂರುಸಾರಿ ಹೇಳಬೇಕು. ವಿಪ್ರರಿಂದ ಆಶೀರ್ವಚನ ಪಡೆಯುವುದು.

ಶಿಶುವಿನ ಜನನ ಕಾಲದಲ್ಲಿ ಲಗ್ನಾದಿದೋಷಗಳಿದ್ದರೆ ತಕ್ಕ ಶಾಂತಿಯನ್ನು ಮಾಡಿ ಬಳಿಕ ಜಾತಕರ್ಮ-ನಾಮಕರಣವನ್ನು ಆಚರಿಸಬೇಕು.

ಇಲ್ಲಿಗೆ ಜಾತಕರ್ಮ-ನಾಮಕರಣ ಮುಗಿಯುವುದು.

## ಉಪನಿಷ್ಕ್ರಮಣ ಪ್ರಯೋಗ

ಶಿಶುವಿಗೆ ಮೂರು, ನಾಲ್ಕನೆಯ ಮಾಸದಲ್ಲಿ ನಡೆಸುವ ಸಂಸ್ಕಾರವಿದು. ಶುಭದಿನದಂದು ಸ್ನಾನಮಾಡಿಸಿ ಶಿಶುವನ್ನು ವಸ್ತ್ರಾದಿಗಳಿಂದ ಅಲಂಕರಿಸುವುದು. ಅಂಗಳದಲ್ಲಿ ಸ್ವಸ್ತಿಕೆಯನ್ನಿಟ್ಟು ಸವಿತೃದೇವತೆಯನ್ನು ಆವಾಹಿಸಿ ನೈವೇದ್ಯಸಮರ್ಪಣೆ ಮಾಡಿ ಪೂಜಿಸಿ, ಮಗು ಸಹಿತ ಮೂರುಪ್ರದಕ್ಷಿಣೆ ಬಂದು ಅನಂತರ ಸಮೀಪದ ದೇವಾಲಯಕ್ಕೆ ಹೋಗಿ, ಪೂಜೆಸಲ್ಲಿಸಿ, ದೇವತಾನುಗ್ರಹ ಪ್ರಾರ್ಥಿಸಿ ಮನೆಗೆ ಬಂದು,

ಸ್ವಸ್ತಿಕೆಯಲ್ಲಿ ಆವಾಹಿಸಿದ ಸವಿತೃದೇವತೆಯನ್ನು ಉದ್ವಾಸನೆ ಮಾಡುವುದು. ನಾಲ್ಕನೇ ಮಾಸದಲ್ಲಿ ಶುಕ್ಲಪಕ್ಷ ಶುಭತಿಥಿಯಂದು ರಾತ್ರಿ ಚಂದ್ರನ ದರ್ಶನ ಮಾಡಿಸಿ ಓಷಧೀದೇವತೆಗಳನ್ನು ಪ್ರಾರ್ಥಿಸುವುದು.



ಇಲ್ಲಿಗೆ ಉಪನಿಷ್ಕ್ರಮಣ ಪ್ರಯೋಗ ಮುಗಿಯುವುದು.



## ಅನ್ನಪ್ರಾಶನ ಪ್ರಯೋಗ

ಶಿಶುವಿಗೆ ಆರನೇ ಮಾಸದಲ್ಲಿ ಅನ್ನಪ್ರಾಶನ ವಿಹಿತವಾಗಿದೆ. ಶುಭದಿನದಂದು ಸ್ವಸ್ತಿವಾಚನ ಆಭ್ಯುದಯಿಕ ಶ್ರಾದ್ಧಮಾಡಿ, ಅನ್ನ-ಹಾಲು-ಮೊಸರು-ಜೇನು ಇವುಗಳನ್ನು ದೇವರಿಗೆ ಸಮರ್ಪಣೆ ಮಾಡಿ ಆರತಿ ಮಾಡುವುದು. ಬ್ರಾಹ್ಮಣರಿಗೆ ದಕ್ಷಿಣೆ ಕೊಟ್ಟು, ಮೊಸರು-ಜೇನು-ತುಪ್ಪ ಮಿಶ್ರ ಮಾಡಿ ಅನ್ನವನ್ನು ಶುದ್ಧಪಾತ್ರೆಯಲ್ಲಿರಿಸಿ, ಪೂರ್ವಾಭಿಮುಖಿಯಾಗಿ ಕುಳಿತ ತಾಯಿಯ ಮಡಿಲಲ್ಲಿರುವ ಶಿಶುವಿಗೆ ಒಂದು ಗ್ರಾಸವನ್ನು ಪ್ರಾಶನ ಮಾಡಿಸಿ ಯಥೇಷ್ಟವಾಗಿ ಉಣಿಸಿ ಮುಖಪ್ರಕ್ಷಾಲನೆ ಮಾಡಿಸುವುದು. ಇದೇ ಸಂದರ್ಭದಲ್ಲಿ ಮಗುವಿಗೆ ಅನ್ನಪ್ರಾಶನಕ್ಕಿಂತ ಮೊದಲು ಶುಭಗಳಿಗೆಯಲ್ಲಿ 'ಕರ್ಣವೇಧ' ಮಾಡುವುದು ಉಪಸಂಸ್ಕಾರವೆನಿಸಿದೆ.

## ಚೌಲಕರ್ಮ ಪ್ರಯೋಗ

ಪ್ರಥಮ-ತೃತೀಯ-ಪಂಚಮ ವಯಸ್ಸಲ್ಲಿ ಚೌಲಸಂಸ್ಕಾರ ಮಾಡಬೇಕು. ಆ ದಿನ ಯಜಮಾನನು ಕುಮಾರನನ್ನು ಅಭ್ಯಂಗಸ್ನಾನ ಮಾಡಿಸಿ, ತನ್ನ ದಕ್ಷಿಣಭಾಗದಲ್ಲಿ ತಾಯಿಯ ಮಡಿಲಲ್ಲಿ ಕುಳ್ಳಿರಿಸಿ, ಸ್ವಸ್ತಿ ಪುಣ್ಯಾಹವಾಚನ-ನಾಂದೀಶ್ರಾದ್ಧವನ್ನು ಪೂರೈಸುವುದು. ಸ್ಥಂಡಿಲ ಉಲ್ಲೇಖನಾದಿಗಳನ್ನು ಮಾಡಿ "ಸಭ್ಯ"ನಾಮ ಅಗ್ನಿಯನ್ನು ಪ್ರತಿಷ್ಠಾಪಿಸಿ ಮೂರ್ತಿಧ್ಯಾನಾನಂತರ ಅನ್ವಾಧಾನ ಮಾಡುವುದು. ಕುಮಾರನಿಗೆ ಜಾತಕರ್ಮಾದಿ ನಾಲ್ಕು ಸಂಸ್ಕಾರಗಳು ಸೂಕ್ತಕಾಲದಲ್ಲಿ ಆಗದೆ ಇದ್ದರೆ ಪ್ರತಿ ಸಂಸ್ಕಾರಗಳ ಬಗ್ಗೆ ನಾಲ್ಕು ನಾಲ್ಕು ವ್ಯಾಹೃತಿಯಿಂದ ಆಜ್ಯಾಹುತಿ ಕೊಟ್ಟು ಅನಂತರ ಚೌಲ ಪ್ರಧಾನಾಹುತಿಯನ್ನು ಕೊಡಬೇಕು. ಜಾತಕರ್ಮಾದಿ ನಾಲ್ಕು ಸಂಸ್ಕಾರಗಳಲ್ಲಿ ಹೋಮವು ಕೃತಾಕೃತವೆಂದೂ ಚೌಲದಿಂದ ಮುಂದಿನ ಸಂಸ್ಕಾರಗಳಲ್ಲಿ ಹೋಮ ಅವಶ್ಯವೆಂದೂ ಆಶ್ವಲಾಯನರ ವಚನ. ಸ್ಥಾಲೀಪಾಕ ವಿಧಿಯಂತೆ ನಡೆಸುವ ಚೌಲಾದಿ ಸಂಸ್ಕಾರಗಳಲ್ಲಿ ಚಕ್ಷುಷೀಹೋಮ ವರ್ಜ್ಯವಾಗಿದ್ದು ಪವಮಾನ ಅಗ್ನಿಯೂ-ಪ್ರಜಾಪತಿಯೂ ಪ್ರಧಾನದೇವತೆಗಳು. ಪ್ರಧಾನಾಹುತಿಯ ಅನಂತರ ಆಯಾಯಾ ಸಂಸ್ಕಾರಗಳಲ್ಲಿ ಗೃಹ್ಯೋಕ್ತವಿಧಿ ಸ್ಪಷ್ಟವಾಗಿದೆ.





ಚೌಲಸಂಸ್ಕಾರ ಹೋಮದ ಪಾತ್ರಾಸಾದನ ಸಂದರ್ಭ ಅಗ್ನಿಯ ಉತ್ತರ ಭಾಗದಲ್ಲಿ ಭತ್ತ-ಯವ-ತಿಲ-ಮಾಷಗಳೆಂಬ ನಾಲ್ಕು ಬಗೆಯ ಧಾನ್ಯಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಪಾತ್ರೆಗಳಲ್ಲಿಡಬೇಕು. ತಾಯಿಯ ಮಡಿಲಲ್ಲಿ ಕುಳಿತ ಕುಮಾರನ ಮುಂಭಾಗದಲ್ಲಿ, ಎತ್ತಿನ ಸೆಗಣಿ, ಶಮೀಪರ್ಣಗಳು, ಕ್ಷೌರಸಾಧನೆಯ ಕತ್ತಿ, ಬಿಸಿನೀರು-ತಣ್ಣೀರು, ಬೆಣ್ಣೆ ಇವಿಷ್ಟನ್ನು ಪಾತ್ರೆಗಳಲ್ಲಿ ಸಂಗ್ರಹಿಸುವುದು. ಬ್ರಹ್ಮನು ಪ್ರಾದೇಶಮಾತ್ರ ಉದ್ದದ ಇಪ್ಪತ್ತೊಂದು ಎಸಳು ದರ್ಭೆಯನ್ನು ಹಿಡಿದಿರಬೇಕು.

ಪ್ರಧಾನಾಹುತಿ ಮುಗಿಸಿ ತಂದೆಯು ಕುಮಾರನ ಪಶ್ಚಿಮ(ಉತ್ತರಮುಖಿವಾಗಿ ದಕ್ಷಿಣ)ದಲ್ಲಿ ನಿಂತುಕೊಂಡು ಬಿಸಿನೀರು, ತಣ್ಣೀರು ಪಾತ್ರೆಗಳನ್ನೆತ್ತಿ ಇನ್ನೊಂದು ಪಾತ್ರಕ್ಕೆ ಸಮಬಿಸಿಯಾಗುವಂತೆ ಮಾಡಿ, ಬೆಣ್ಣೆ ಹಾಗೂ ಸಮ ಬಿಸಿಯಿರುವ ನೀರಿನಿಂದ ತೆಗೆದು ಕುಮಾರನ ಎಡ ಕರ್ಣಪ್ರದೇಶದಿಂದ ಪ್ರಾರಂಭಿಸಿ ಪ್ರದಕ್ಷಿಣೆಯಾಗಿ ತಲೆಯನ್ನು ಮೂರು ಬಾರಿ ಒದ್ದೆಮಾಡುವುದು. ಬ್ರಹ್ಮನ ಕೈಯಿಂದ ಮೂರು ಎಸಳು ದರ್ಭೆ ಪಡೆದು ಪಶ್ಚಿಮಾಗ್ರವಾಗಿ ಹಾಗೂ ಕತ್ತಿಯನ್ನು ಜೊತೆಯಾಗಿ ಬಲಕಿವಿಯ ಭಾಗದಲ್ಲಿ ಹಿಡಿದು ಕೂದಲುಸಹಿತ ದರ್ಭೆಗಳನ್ನು ಕತ್ತರಿಸಿ ಪತ್ನಿಯ ಕೈಯಲ್ಲಿ ಪೂರ್ವಕ್ಕೆ ಅಗ್ರವಾಗುವಂತೆ ಶಮೀಪರ್ಣದೊಂದಿಗೆ ಕೊಡಬೇಕು. ಆಕೆಯು ಹಾಗೆಯೇ ಎತ್ತಿನ ಸೆಗಣಿಯಲ್ಲಿ ಹಾಕುವುದು. ಕ್ರಮದಂತೆ ಅದೇ ಭಾಗದಲ್ಲಿ ಒಟ್ಟು ಮೂರು ಸಾರಿಯೂ ಜಲಕ್ಲೇದನ ಮೊದಲುಗೊಂಡು ದರ್ಭೆಸಹಿತ ಕೂದಲನ್ನು ಬೇರೆಬೇರೆ ಮಂತ್ರಗಳಿಂದ ಕತ್ತರಿಸಿ ನಾಲ್ಕನೆಯ ಬಾರಿ ಮೂರು ಮಂತ್ರಗಳನ್ನು ಒಟ್ಟು ಹೇಳಿ ಒಮ್ಮೆ ಕತ್ತರಿಸುವುದು. ಅನಂತರ ಎಡಕಿವಿಯ ಭಾಗದಲ್ಲೂ ಮೂರು ಮಂತ್ರಗಳಿಂದ ಮಾತ್ರ ಕತ್ತರಿಸಲು ಒಟ್ಟು ಏಳು ಸಾರಿಯ ಛೇದನದಲ್ಲಿ ಇಪ್ಪತ್ತೊಂದು ಎಸಳು ದರ್ಭೆಸಹಿತ ಕೂದಲು ಛೇದನವಾಗುವುದು. ಕತ್ತಿಯನ್ನು ಆಮೂಲಾಗ್ರ ಕೈಯಲ್ಲಿ ಉಜ್ಜಿ, ನಾಪಿತನನ್ನು ಕರೆದು ಕುಲಾಚಾರದಂತೆ ಜಾಗ್ರತೆಯಾಗಿ ಕ್ಷೌರ ಮಾಡುವಂತೆ ಕುಮಾರನನ್ನು ಕಳುಹಿಸುವುದು. ಆಚಾರವಿಶೇಷದಂತೆ ಸೋದರಮಾವನು ಕುಮಾರನನ್ನೂ ತನ್ನ ಮಡಿಲಲ್ಲಿ ಕುಳ್ಳಿರಿಸಿ ನಾಪಿತನಿಂದ ಕ್ಷೌರ ಮಾಡಿಸುವ ವಾಡಿಕೆ ಇದೆ. ಕ್ಷೌರ ಮುಗಿಯಲು ಸ್ನಾನ ಮಾಡಿಸಿ ತುಳಸೀ ಸಮೀಪ ಸುಮಂಗಲೆ ಯರಿಂದ ನಾಲ್ಕು ಕುಂಭಗಳಲ್ಲಿ ಮಂಗಲ(ಅರಶಿನ ಮಿಶ್ರಿತ)ಜಲ ಪ್ರೋಕ್ಷಣೆ ಮಾಡಿಸಿ ಹೊಸ ಬಟ್ಟೆಗಳಿಂದ ಕುಮಾರನನ್ನು ಅಲಂಕರಿಸಿ ಪೂರ್ವದಂತೆ ಕುಳಿತು ಹೋಮಶೇಷವನ್ನು ಪೂರ್ಣಗೊಳಿಸುವುದು. ಉತ್ತರಭಾಗದಲ್ಲಿಟ್ಟ ಧಾನ್ಯಗಳನ್ನು ವಿಶೇಷ ಮರ್ಯಾದೆಯೊಂದಿಗೆ ನಾಪಿತನಿಗೆ ಕೊಟ್ಟು ಕಳುಹಿಸಿ, ಬ್ರಾಹ್ಮಣರಿಗೆ ಭೋಜನ ಹಾಗೂ ವಿಶೇಷ ದಕ್ಷಿಣಾದಿಗಳನ್ನು ನೀಡಿ ಅವರಿಂದ ಆಶೀರ್ವಾದ ಪಡೆಯಬೇಕು. ಪ್ರಾಪ್ತವಯಸ್ಸಿನಲ್ಲಿ ಶುಭದಿನದಂದು 'ಅಕ್ಷರಾಭ್ಯಾಸ' ಮಾಡಿಸಬೇಕು.

ಇಲ್ಲಿಗೆ ಚೌಲಕರ್ಮ ಸಮಾಪ್ತಿಗೊಳ್ಳುವುದು.

## ಉಪನಯನ ಪ್ರಯೋಗ

ಕುಮಾರನಿಗೆ ಜನ್ಮತಃ ಏಳು (ಗರ್ಭವಾಸ ಸೇರಿ ಎಂಟು) ವಯಸ್ಸಿನಲ್ಲಿ ಈ ಸಂಸ್ಕಾರವು ಪ್ರಶಸ್ತವೆನಿಸಿದೆ.

ಯಜಮಾನನು ಸ್ವಸ್ತಿಪುಣ್ಯಾಹವಾಚನ-ನಾಂದಿಶ್ರಾದ್ಧ ಮಾಡಿ, ಬ್ರಾಹ್ಮಣರಿಗೆ ಪ್ರದಕ್ಷಿಣೆ ಬಂದು ಹಿರಣ್ಯವನ್ನು ಭೂಮಿಯಲ್ಲಿಟ್ಟು ಪ್ರಾರ್ಥಿಸಲು ವಿಪ್ರರು ಕೃಚ್ಛ್ರ ಆಚರಿಸುವಂತೆ ಹೇಳಲು ಕೃಚ್ಛ್ರರೂಪವಾಗಿ ವಸ್ತ್ರದಾನಾದಿಗಳನ್ನು ಮಾಡುವುದು. ನಾಂದಿಶ್ರಾದ್ಧವನ್ನು ಆರು ದಿನ ಮೊದಲೂ ಆಚರಿಸಬಹುದು. ಕುಮಾರನನ್ನು ತಾಯಿ ಜೊತೆ, ದೇವರಿಗೆ ಸಮರ್ಪಿಸಿದ ನೈವೇದ್ಯವನ್ನು ಸಾತ್ವಿಕ ಪದಾರ್ಥಗಳೊಂದಿಗೆ ಭೋಜನಮಾಡಿಸಿ ಅನಂತರ ನಾಪಿತನಿಂದ ಕುಲಾಚಾರ ಸಂಪ್ರದಾಯದಂತೆ ಕ್ಷೌರಮಾಡಿಸುವುದು. ಸಂಪ್ರದಾಯದಂತೆ ತಂದೆಯು ಚೌಲದಂತೆ ಅಮಂತ್ರಕ ಕ್ಷೌರ ಮಾಡಿ ಅನಂತರ ನಾಪಿತನಿಂದ ಮಾಡಿಸುವುದು ರೂಢಿ. ಬಳಿಕ ಸ್ನಾನಮಾಡಿಸಿ ಗೋಪಿಚಂದನಾದಿ ಪುಂಡ್ರತಿಲಕಗಳಿಂದ ಅಲಂಕರಿಸಿ, ಕೌಪೀನ ಹಾಗೂ ಕಾಷಾಯ (ಹಳದಿಯ)ವರ್ಣದ ಬಟ್ಟೆಯನ್ನುಡಿಸಿ ತಂದೆಯು ಸಪತ್ನೀಕನಾಗಿ ಕುಮಾರನನ್ನು ದಕ್ಷಿಣಭಾಗದಲ್ಲಿ ಕುಳ್ಳಿರಿಸಿ ಸಂಕಲ್ಪಮಾಡುವುದು. ನವಗ್ರಹಜಪ ಮತ್ತು ಗಾಯತ್ರೀಜಪಾದಿಗಳಿಗೆ ಬ್ರಾಹ್ಮಣರನ್ನು ಪ್ರಾರ್ಥಿಸಿ ವರಣಮಾಡುವುದು. "ಸಮುದ್ಭವ" ನಾಮಾಗ್ನಿಯನ್ನು ಪ್ರತಿಷ್ಠಾಪಿಸಿ, ಉಪನಯನ ಹೋಮದ ಜೊತೆಯಲ್ಲಿ ಅನುಪ್ರವಚನೀಯ ವಿಧಿಯನ್ನು ನಡೆಸುವುದಿದ್ದರೆ ಉಭಯಕರ್ಮಗಳಿಗೂ ಅನ್ವಾಧಾನ ನಡೆಸುವುದು. ಆಜ್ಯ ಉತ್ಪವನ ಪರಿಯಂತ ಕರ್ಮಗಳನ್ನು ಮಾಡುವುದು.

ಈಶಾನ್ಯಭಾಗದಲ್ಲಿ ಚತುರಸ್ರಮಂಡಲ ಮಾಡಿ ಮಧ್ಯೇ ಪದ್ಮವನ್ನು ಬರೆದು ಕುಮಾರನ ವರ್ಷಸಂಖ್ಯೆಯಷ್ಟು ಸೇರು ಧಾನ್ಯವನ್ನು ಹರಡಿ ಸುತ್ತಲೂ ತೆಂಗಿನಕಾಯಿ, ತಾಂಬೂಲ-ಅಡಕೆಗಳನ್ನು ಇಟ್ಟು ಮಧ್ಯದಲ್ಲಿ ಕುಮಾರನನ್ನು ಪೂರ್ವಾಭಿಮುಖವಾಗಿ ನಿಲ್ಲಿಸಿ, ಎಡದ ಕೈಯನ್ನು ನಾಭಿಯಲ್ಲಿರಿಸಿ, ಬಲದ ಕೈಯನ್ನು ಕೂರ್ಚ-ಸುವರ್ಣಸಹಿತ ಶಿರದ ಮೇಲಿರಿಸುವುದು. ಒಮ್ಮೆ ಒಗೆದ ಬಿಳಿ ವಸ್ತ್ರವನ್ನು ಪೂರ್ಣವಾಗಿ ಆಚ್ಛಾದನ ಮಾಡಿ ದರ್ಭೆಯ ರಜ್ಜುವನ್ನು ಪಾದ-ತೊಡೆ-ಸೊಂಟ-ಹೃದಯಸ್ಥಾನಗಳಲ್ಲಿ ಸುತ್ತಿ ಶಿರದಲ್ಲಿ ಮೇಲ್ಮುಖವಾಗಿ ಏಳು ಎಸಳಿನ ಕೂರ್ಚವನ್ನು ಇಡುವುದು. ಬ್ರಾಹ್ಮಣರಿಗೆ ಫಲ, ಗೋಪೀಚಂದನ, ಉಪವೀತಗಳನ್ನು ದಾನಮಾಡಿ, ಬ್ರಾಹ್ಮಣರು ಮಂಗಲಾಷ್ಟಕವನ್ನು ಪಠಿಸುತ್ತಿರಲು, ಸುಮುಹೂರ್ತದಲ್ಲಿ ಅಭಿಮಂತ್ರಿತ ಉತ್ತರೀಯ, ಅಜಿನ, ಉಪವೀತಗಳನ್ನು ಜೊತೆಯಾಗಿ ಹಿಡಿದು, ಕುಮಾರನ ಪಾದಾದಿ ಕೇಶಪರ್ಯಂತ ಗಾಯತ್ರೀಮಂತ್ರದಿಂದ ವ್ಯಾಪಕಮಾಡಿ, ಮೊದಲು ಉತ್ತರೀಯ, ಅನಂತರ ಅಜಿನ-ಉಪವೀತಗಳನ್ನು ಕ್ರಮವಾಗಿ ಬಲದ ಕೈಗಂಟಿನಲ್ಲಿ ಪ್ರವೇಶಗೊಳಿಸಿ ಎಡಹೆಗಲಿನಲ್ಲಿರುವಂತೆ ಧರಿಸಬೇಕು. ಧಾರಣೆಯ ಮಂತ್ರಗಳನ್ನು ಕುಮಾರನಿಂದಲೂ ಹೇಳಿಸಬೇಕು. ಕುಮಾರನ ಶಿರದಲ್ಲಿ ತನ್ನ ಬಲದ ಕೈಯಿರಿಸಿ ಪ್ರತಿಷ್ಠಾಮಂತ್ರ ಹಾಗೂ ಬ್ರಹ್ಮಗಾಯತ್ರೀಮಂತ್ರವನ್ನು



ಜಪಿಸುವುದು. ಬಳಿಕ ನೀರಿನಿಂದ ಪ್ರೋಕ್ಷಿಸಿ, ಸುತ್ತಿದ ರಜ್ಜುವನ್ನು ಬಿಡಿಸಿ ಪ್ರಾವರಣವನ್ನು ಸರಿಸಿ, ಕ್ರಮವಾಗಿ ಮೊದಲಿಗೆ ತಾಯಿ, ತಂದೆ, ಅಗ್ನಿ, ಬಂಧುಗಳನ್ನು ತೋರಿಸುವುದು. ಕುಮಾರನು ಪ್ರದಕ್ಷಿಣೆಯಾಗಿ ಅಗ್ನಿ ಆಚಾರ್ಯರ ಮಧ್ಯದಿಂದ ಉತ್ತರಭಾಗಕ್ಕೆ ಬಂದು ಕುಳಿತು ದ್ವಿರಾಚಮನ-ಪವಿತ್ರಧಾರಣ ಮಾಡಿ, ಹಾಗೆಯೇ ಹಿಂದೆ ಬಂದು ತಂದೆಯ ದಕ್ಷಿಣದಲ್ಲಿ ಕುಳಿತುಕೊಳ್ಳುವುದು.

ಆಚಾರ್ಯನು ಆಜ್ಯಸ್ಥಾಲಿಸ್ಥಾಪನಾದಿ ಪ್ರಧಾನಹೋಮ ಪರ್ಯಂತ ಮಾಡುವುದು. ಪುನಃ ಕುಮಾರನು ಅಗ್ನಿ ಆಚಾರ್ಯ ಮಧ್ಯದಲ್ಲಿ ಉತ್ತರಭಾಗಕ್ಕೆ ಬಂದು ಪಶ್ಚಿಮಾಭಿಮುಖನಾಗಿ ನಿಲ್ಲಲು ಯಜಮಾನನು ಕುಮಾರನ ಪಶ್ಚಿಮದಲ್ಲಿ ಅಭಿಮುಖನಾಗಿ ನಿಂತು, ವಟುವಿನ ಅಂಜಲಿಗೆ ಶುದ್ಧ ನೀರು ಸುರಿದು, ಇನ್ನೊಬ್ಬರಿಂದ (ಸಂಪ್ರದಾಯದಂತೆ ಪತ್ನಿಯಿಂದ) ತನ್ನ ಅಂಜಲಿಗೂ ನೀರು ಸುರಿಸಿಕೊಂಡು ಕುಮಾರನ ಅಂಜಲಿಸ್ಥಜಲಕ್ಕೆ ಸುರಿಯಲು ಆ ನೀರು ಕೆಳಗಡೆ ಪಾತ್ರಕ್ಕೆ ಸುರಿಯುವಂತಾಗಬೇಕು. ಕುಮಾರನ ಅಂಗುಷ್ಠಸಹಿತ ಬಲದ ಕೈಯನ್ನು ತನ್ನ ಕೈಯಿಂದ ಹಿಡಿಯಬೇಕು. ಹೀಗೆ ಮೂರು ಸಾರಿ ಅವಕ್ಷಾರಣೆ ನಡೆಸಿ ಮಂಟಪಪ್ರದೇಶದಿಂದ ಹೊರಗೆ ಕರೆದುಕೊಂಡುಹೋಗಿ ಸೂರ್ಯನನ್ನು ಪ್ರಾರ್ಥಿಸಿ, ಬಂದು ಅದೇ ಸ್ಥಾನದಲ್ಲಿ ನಿಲ್ಲಲು, ವಟುವಿನ ಭುಜಗಳಲ್ಲಿ ತನ್ನ ಕೈಗಳನ್ನು ಇರಿಸಿ, ಪ್ರದಕ್ಷಿಣೆಯಾಗಿ ಪೂರ್ವಾಭಿಮುಖವಾಗಿ ನಿಲ್ಲಿಸಿ ಆತನ ಹೃದಯವನ್ನು ಸ್ಪರ್ಶಿಸಬೇಕು. ಅನಂತರ ಆಚಾರ್ಯನು ವಟುವನ್ನು ಅಗ್ನಿಯ ಸಮೀಪ ಕುಳ್ಳಿರಿಸಿ ಅಗ್ನಿಕಾರ್ಯವನ್ನು ಮಾಡಿಸಬೇಕು. ಅಗ್ನ್ಯುಪಸ್ಥಾನ, ವಿಭೂತಿಗ್ರಹಣ, ಉಪಸ್ಥಾನಪೂರ್ವಕ ಅಭಿವಾದನ ಮಾಡಿಸುವುದು. ವಟುವು ಆಚಾರ್ಯಾಭಿಮುಖಿಯಾಗಿ, (ವಾಡಿಕೆಯಂತೆ) ತಂದೆ ತನ್ನ ಎಡ-ಬಲ ಕೈಗಳಿಂದ ಎಡ-ಬಲ ಕಿವಿಗಳನ್ನು ಹಿಡಿದುಕೊಂಡು ಗೋತ್ರ, ನಾಮ ಉಚ್ಚರಿಸಿ ಆಚಾರ್ಯನ ಬಲ-ಎಡ ಜಾನುವಿನಿಂದ ಪಾದಗಳತನಕ (ವ್ಯತ್ಯಸ್ತಪಾಣಿಯಾಗಿ) ಮುಟ್ಟಿ ಅಭಿವಾದನಮಾಡಿ ಗಾಯತ್ರೀಮಂತ್ರ ಉಪದೇಶಕ್ಕಾಗಿ ಪ್ರಾರ್ಥಿಸಲು, ಆಚಾರ್ಯನು ಗೋದಾನಕ್ಕೆ ಬದಲಾಗಿ ಫಲದಾನ ಕೊಟ್ಟು ವಟುವನ್ನು ತನ್ನ ಬಲದ ತೊಡೆಯ ಮೇಲೆ ಕುಳ್ಳಿರಿಸುವುದು. ವಟುವು ತನ್ನ ಎಡದ ಕೈಯನ್ನು ಮೇಲ್ಮುಖವಾಗಿಯೂ ಬಲಗೈಯನ್ನು ಅದರ ಮೇಲೆ ಮುಚ್ಚಿ ಅಂಗುಷ್ಠ ಬೆರಳುಗಳಿಂದ ದೃಢೀಕರಿಸಲು ಆಚಾರ್ಯನು ಸಂಪುಟದಂತೆ ಶಿಷ್ಯನ ಬ್ರಹ್ಮಾಂಜಲಿಯನ್ನು ಹಿಡಿದು ವಸ್ತ್ರದಿಂದ ಆಚ್ಛಾದಿತರಾಗಿ, ಪ್ರಣವ-ವ್ಯಾಹೃತಿ ಪೂರ್ವಕವಾಗಿ ಗಾಯತ್ರೀಮಂತ್ರವನ್ನು ಮೂರುಸಾರಿ ವಟುವಿನಿಂದ ಹೇಳಿಸುವುದು. ಅನಂತರ ವಟುವಿನ ಹೃದಯದಲ್ಲಿ ಬಲದ ಕೈಬೆರಳುಗಳು ಮೇಲ್ಮುಖವಾಗುವಂತೆ ಇರಿಸಿ ಮಂತ್ರವನ್ನೂ-ಅದರ ಅರ್ಥವನ್ನೂ ತಿಳಿಸುವುದು. ಬಳಿಕ ರಕ್ಷಣಾರ್ಥವಾಗಿ ಹಾಗೂ ಪುಷ್ಟಿಗಾಗಿ ಆತನ ಕಟಿಪ್ರದೇಶವನ್ನು ದರ್ಭೆಯ ರಜ್ಜುವಿನಿಂದ ಮೂರು ಸುತ್ತು ಸುತ್ತಿ ನಾಭಿಪ್ರದೇಶದಲ್ಲಿ ಮೂರು ಗ್ರಂಥಿ ಹಾಕುವುದು. ಪಲಾಶದಂಡವನ್ನು ಕೊಡುವುದು. ಬ್ರಹ್ಮಚರ್ಯವ್ರತವನ್ನು ದೇಶಕಾಲಕ್ಕನುಗುಣವಾಗಿ ಉಪದೇಶಿಸುವುದು. ರಾತ್ರಿ ಮಾಡಬೇಕಾಗಿದ್ದ ಅನುಪ್ರವಚನೀಯ ಹೋಮವನ್ನು ಸದ್ಯವೇ ಆಚರಿಸುವುದರಿಂದ ಸ್ವಿಷ್ಟಕೃದಾದಿಗಳನ್ನು ಬಾಕಿ ಮಾಡಿ ಭಿಕ್ಷಾಯಾಚನೆ ಮಾಡಿಸುವುದು.

ವಟುವು ಮೊದಲು ತಾಯಿಯಿಂದಲೂ ಅನಂತರ ತಂದೆಯಿಂದಲೂ ಹಾಗೂ ಉಳಿದ ಬಂಧುಗಳಿಂದಲೂ ಯಾಚನೆ ಮೂಲಕ ಭಿಕ್ಷೆ

ಪಡೆಯುವುದು. ಅವಕಾಶವಿದ್ದಲ್ಲಿ ಸುವಾಸಿನಿಯರಿಂದ ನೀರಾಜನ ಮಾಡಿಸಿಕೊಂಡು ಅಕ್ಕಿ ಭಾರದ (ಅಕ್ಕಿಯ ಮುಡಿಯ) ಮೇಲೆ ಸ್ವಲ್ಪಕಾಲ ಕುಳಿತುಕೊಳ್ಳುವುದು. ಇಂದಿನ ಕಾಲಮಾನ ಪ್ರಕಾರ ಅನುಪ್ರವಚನೀಯ ಕರ್ಮವನ್ನೂ ಮೇಧಾಜನನ ವಿಧಿಯನ್ನೂ ಸದ್ಯವೇ ಮುಗಿಸುವುದು ರೂಢಿಯಲ್ಲಿದೆ. ಅಂದು ರಾತ್ರಿ ಸಂಧ್ಯಾವಂದನ-ಅಗ್ನಿಕಾರ್ಯ ಮುಗಿಸಿ ಮಧ್ಯಾಹ್ನದಲ್ಲಿ ಪ್ರತಿಷ್ಠಾಪಿಸಿ ಹೋಮಿಸಿದ ಅಗ್ನಿಯಲ್ಲೇ ಅನುಪ್ರವಚನ ಕರ್ಮವನ್ನೂ ಅಂದಿನಿಂದ ನಾಲ್ಕನೇ ದಿನ ಅಥವಾ ಮರುದಿನ ಮೇಧಾಜನನ-ಅವಭೃಥ ನಡೆಸುವುದು ಉತ್ತಮ ಪಕ್ಷ. ಒಂದು ವೇಳೆ ಮೇಧಾಜನನಸಂಸ್ಕಾರ ಮರುದಿನ ಮಾಡುವುದಾದರೆ ಮಂತ್ರವನ್ನು ಉಪದೇಶಿಸಿದ ಆಚಾರ್ಯ(ಪಿತ)ನ ಜೊತೆ ಅಂದು ಮಧ್ಯಾಹ್ನ ಉಪವಾಸವಿದ್ದು ವಟುವು ಸಾಯಂಕಾಲ ಸಂಧ್ಯಾವಂದನೆ ಹಾಗೂ ಉಪನಯನಸಮಯದಿಂದ ರಕ್ಷಿಸಿದ ಅಗ್ನಿಯನ್ನು ಪ್ರಜ್ವಲನೆಗೊಳಿಸಿ ಅಗ್ನಿಕಾರ್ಯ ಮಾಡಬೇಕು. ಭಿಕ್ಷಾಯಾಚನೆಯಿಂದ ಸಿಕ್ಕಿದ ಅಕ್ಕಿಯಲ್ಲಿ ಭೋಜನಕ್ಕೆ ಸಾಕಾಗುವಷ್ಟು ಬೇಯಿಸಿ ದೇವತಾತ್ರಯರಿಗೆ ಕಿಂಚಿತ್ತು ಆಹುತಿ ನೀಡಿ ಹೋಮ ಸಮಾಪ್ತಿಗೊಳಿಸಿ, ಭೋಜನ ಮಾಡಬೇಕು. ಇದನ್ನು ಬ್ರಹ್ಮಭೋಜನವೆಂದೂ ಹೇಳುತ್ತಾರೆ. ಅನಿವಾರ್ಯ ಪ್ರಸಂಗದಲ್ಲಿ- ಭಿಕ್ಷೆ ಮುಗಿದ ತತ್‌ಕ್ಷಣ ಲಭ್ಯವಾದ ಭಿಕ್ಷೆಯ ಅಕ್ಕಿಯನ್ನು ದೇವತಾತ್ರಯರಿಗೆ ಸಾಕಾಗುವಷ್ಟು ನಿರ್ವಾಪ ಪ್ರೋಕ್ಷಣೆ ಕ್ರಮವಾಗಿ ಬೇಯಿಸಿ, ಆಹುತಿ ಕೊಡುವುದು, ಅನಂತರ ಸ್ವಿಷ್ಟಕೃದಾದಿ ಹೋಮಶೇಷವನ್ನು ಮುಕ್ತಾಯಗೊಳಿಸುವುದು.

ಬಳಿಕ ಈಶಾನ್ಯಭಾಗದಲ್ಲಿ ಮೃತ್ತಿಕೆಯಿಂದ ವೇದಿಕೆಯನ್ನು ಸಿದ್ಧಗೊಳಿಸಿ ಪಲಾಶಶಾಖಾ ಅಥವಾ ಬೇರುಸಹಿತ ದರ್ಭೆಯ ಸಸಿಯನ್ನು ನೆಟ್ಟು, ಪಶ್ಚಿಮಭಾಗದಲ್ಲಿ ಸ್ವಸ್ತಿಕೆಯಲ್ಲಿ ಸವಿತೃದೇವತೆಯನ್ನೂ ಮೇಧಾದೇವತೆಯನ್ನೂ ಆವಾಹಿಸಿ ಷೋಡಶೋಪಚಾರಗಳಿಂದ ಪೂಜಿಸುವುದು. ವಟುವು ಶುದ್ಧವಾದ ನೀರನ್ನು ವೇದಿಕೆಯಲ್ಲಿರುವ ಶಾಖಾಸ್ತಂಭಮೂಲಕ್ಕೆ ಸೇಚನ ಮಾಡುತ್ತಾ ಮೂರು ಸಾರಿ ಪ್ರದಕ್ಷಿಣೆ ಬರುವುದು. ಅಭಿವಾದನ ಮಾಡಿ ಕುಳಿತು ಸ್ನಾನಾಂಗಪ್ರೋಕ್ಷಣೆ ಮಾಡಿ ನೂತನ ಉಪವೀತ-ಅಜಿನ-ದಂಡಾದಿಗಳನ್ನು ಸಮಂತ್ರಕವಾಗಿ ತಾನೇ ಧರಿಸಿ ಹಳೆಯ ಉಪವೀತಾದಿಗಳನ್ನು ವಿಸರ್ಜಿಸಿ ವೇದಿಕಾಮೂಲದಲ್ಲಿಟ್ಟು ಆಚಮನಮಾಡಿ ಆವಾಹಿತ ದೇವತೆಗಳನ್ನು ಉದ್ವಾಸನೆಗೈದು ಬ್ರಾಹ್ಮಣರಿಗೆ ತಾಂಬೂಲದಕ್ಷಿಣೆ ಕೊಟ್ಟು ಗೋತ್ರಾಭಿವಾದನ ಮಾಡಿ ಮೇಧಾಸೂಕ್ತವನ್ನು ಜಪಿಸುವಂತೆ ಪ್ರಾರ್ಥಿಸಿ ಆಶೀರ್ವಾದ ಪಡೆಯುವುದು.

ಇಲ್ಲಿಗೆ ಉಪನಯನ ಪ್ರಯೋಗವು ಮುಗಿಯುವುದು.



## ಸಮಾವರ್ತನ ಪ್ರಯೋಗ

ಬ್ರಹ್ಮಚರ್ಯವ್ರತಾದಿಗಳನ್ನು ಪೂರೈಸಿ ಸ್ನಾತಕವ್ರತಸ್ಥನೆನಿಸುವುದೇ ಸಮಾವರ್ತನ ಸಂಸ್ಕಾರವಾಗಿದೆ. ಈ ಸಂಸ್ಕಾರದ ಮೊದಲು ಉಪನಯನದ ಅನಂತರ ವಿಶೇಷ ಬ್ರಹ್ಮಜ್ಞಾನಾರ್ಜನೆಗಾಗಿ ಗುರುಕುಲವಾಸದೊಂದಿಗೆ ಮಹಾನಾಮ್ನಿ-ಮಹಾವ್ರತ-ಉಪನಿಷದ್‌ವ್ರತ-ಗೋದಾನ ವ್ರತಗಳೆಂದು ನಾಲ್ಕು ಸಂಸ್ಕಾರಗಳು ವಿಹಿತವಾಗಿವೆ. ಆದರೆ ಇದೀಗ ಆಚರಣೆಯಲ್ಲಿ ಇಲ್ಲ. ಇಂದಿನ ರೂಢಿಯಂತೆ ಆಶ್ರಮವಾಸ-ವಿದ್ಯಾಭ್ಯಾಸದ ಬದಲು ಲೌಕಿಕವಾಗಿ ಜೀವನೋಪಾಯಕ್ಕೆ ಸಂಬಂಧಿಸಿದಂತೆ ವಿದ್ಯಾಭ್ಯಾಸ ನಡೆಸಿ ಗೃಹಸ್ಥಜೀವನ ಪ್ರಾರಂಭಕ್ಕಿಂತ ಮೊದಲು ಸಮಾವರ್ತನ ಸಂಸ್ಕಾರವು ಬಳಕೆಯಾಗಿದೆ.

ಸಮಾವರ್ತನ ದಿನ ಪುಣ್ಯಾಹ-ನಾಂದೀಶ್ರಾದ್ಧ ಹಿರಿಯರಿಂದ ನಡೆಸಿಕೊಂಡು, ತಾನು ಲೌಕಿಕ ವಿದ್ಯಾಭ್ಯಾಸ ಸಂದರ್ಭದಲ್ಲಿ ಬ್ರಹ್ಮಚರ್ಯವ್ರತಲೋಪಕ್ಕಾಗಿ ಬ್ರಾಹ್ಮಣರಿಂದ ಅನುಜ್ಞೆ ಪಡೆದು ಕೃಚ್ಛ್ರ ಆಚರಿಸಿ, ಸೂರ್ಯನಾಮ ಅಗ್ನಿಯನ್ನು ಪ್ರತಿಷ್ಠಾಪಿಸಿ ಮೂರು ಸಮಿಧೆಗಳನ್ನು ಹಿಡಿದುಕೊಂಡು ಅನ್ವಾಧಾನ ನಡೆಸುವುದು. ಅನಂತರ ಒಂದು ಸಮಿಧೆಯನ್ನು ಮೇಲೆ ಇಟ್ಟು ಎರಡು ಸಮಿಧೆಯನ್ನು ಮಾತ್ರ ಆಹುತಿ ಕೊಡುವುದು. ಚೌಲದ ವಿಧಿಯಂತೆ ಉತ್ತರಭಾಗದಲ್ಲಿ ಧಾನ್ಯಚತುಷ್ಟಯಗಳನ್ನೂ, ದಕ್ಷಿಣಭಾಗದಲ್ಲಿ ಅನಡುಹ ಗೋಮಯಾದಿಗಳನ್ನು ಸಂಗ್ರಹಿಸುವುದು. ಮಹಾನಾಮ್ನ್ಯಾದಿ ವ್ರತಚತುಷ್ಟಯ ಲೋಪಪ್ರಾಯಶ್ಚಿತ್ತವಾಗಿ ಗಾಯತ್ರಿಯಿಂದ ಆಜ್ಯಾಹುತಿ ಕೊಟ್ಟು, ಸಮಾವರ್ತನ ಅಂಗವಾಗಿ ಪ್ರಧಾನಹೋಮ ನಡೆಸುವುದು. ಚೌಲದಂತೆ ತಾನೇ ಶ್ಮಶ್ರುಕರ್ಮವನ್ನು ನಡೆಸುವಲ್ಲಿ ಮಂತ್ರವ್ಯತ್ಯಾಸಗಳನ್ನು ಗಮನಿಸಬೇಕು. ಬಳಿಕ ನಾಪಿತನಿಂದ ಅಂದವಾಗಿ ಶ್ಮಶ್ರುಕರ್ಮ ಮಾಡಿಸಿಕೊಂಡು ಸ್ನಾನಮಾಡಿ, ನೂತನವಸ್ತ್ರ ಉಟ್ಟು, ಗೋಪೀಚಂದನತಿಲಕವನ್ನು ಧರಿಸಿ, ಎರಡು ಉಪವೀತ ಹಾಕಿಕೊಂಡು, ಉತ್ತರೀಯವುಳ್ಳವನಾಗಿ ಆಚಮನ ಮಾಡಿಕೊಳ್ಳುವುದು. ಅಂಜನ ತೆಗೆದುಕೊಂಡು ಮೊದಲು ಎಡ-ಬಲ ಕಣ್ಣಿಗೆ ಹಚ್ಚಿಕೊಳ್ಳುವುದು. ಕುಂಡಲವನ್ನು ಬಲ-ಎಡ ಕಿವಿಗೂ ಹಾಕಿಸಿಕೊಳ್ಳುವುದು. ಕುಂಕುಮವನ್ನು ಎರಡು ಕೈಗಳಿಂದ ಸರ್ವಾಂಗ ಅನುಲೇಪನಮಾಡಿಕೊಂಡು, ತಲೆಗೆ ಒಂದು ಮಾಲೆಸುತ್ತಿ, ಪಾದುಕೆಗಳನ್ನು ಧರಿಸಿ, ಕೊಡೆ ಹಿಡಿದುಕೊಂಡು, ವೈಣವದಂಡ, ಕೊರಳಿಗೆ ಮಣಿಮಾಲೆ ಧರಿಸಿ ಹಾಗೂ ಪ್ರದಕ್ಷಿಣಕ್ರಮದಲ್ಲಿ ತಲೆಗೆ ರುಮಾಲು ಸುತ್ತಿ, ಕಾಶೀಯಾತ್ರಾರ್ಥವಾಗಿ ಸಂಕಲ್ಪ ಮಾಡಿ ಉತ್ತರದಿಕ್ಕಿಗೆ ಏಳು ಹೆಜ್ಜೆ ನಡೆದು, ಮಾವ ಬಂದು ತಡೆಯಲು ಯಾತ್ರಾಸಾಮಗ್ರಿಗಳಾದ ಪಾದುಕೆ-ಛತ್ರ-ದಂಡಗಳನ್ನು ಅಲ್ಲೇ ಬಿಟ್ಟು ಅಗ್ನಿಸಮೀಪ ಬಂದು ಮೊದಲು ಮೇಲಿಟ್ಟ ಸಮಿಧೆಯನ್ನು ಆಹುತಿ ಕೊಡುವುದು. ಅನಂತರ ಕುಳಿತು ಹತ್ತು ಸಮಿಧೆಗಳನ್ನು ಹೋಮಿಸಿ, ಸ್ವಿಷ್ಟಕೃದಾದಿ ಹೋಮಶೇಷ ಸಮಾಪನ ಗೊಳಿಸುವುದು. ಸ್ನಾತಕವ್ರತದೀಕ್ಷಾಬದ್ಧನಾಗುವುದು.

ಇಲ್ಲಿಗೆ ಸಮಾವರ್ತನ ಮುಗಿಯುವುದು

## ವಿವಾಹಪ್ರಯೋಗ

ಕನ್ಯಾ-ವರಪಿತೃಗಳು ಮಂಗಳಸ್ನಾನಮಾಡಿ, ತಮ್ಮ ತಮ್ಮ ಕುಲದೇವತೆಯನ್ನೂ ಇಷ್ಟದೇವರನ್ನೂ ಪ್ರಾರ್ಥಿಸಿ, ಪುಣ್ಯಾಹ-ನಾಂದೀ ಸಮಾರಾಧನೆ ಆಚರಿಸುವುದು. ವಿವಾಹದಿನಕ್ಕಿಂತ ಗರಿಷ್ಠ ಹತ್ತು ದಿನ ಮೊದಲು ಶುಭದಿನದಂದು ನಾಂದೀಸಮಾರಾಧನೆ ನಡೆಸಬಹುದು. ವಿವಾಹದಿನ ವರನು ನಿತ್ಯಾಹ್ನಿಕಗಳನ್ನು ಪೂರೈಸಿ, ಸಾತ್ವಿಕಾಹಾರ ಸೇವಿಸಿ, ಒಮ್ಮೆ ಒಗೆದ ನೂತನವಸ್ತ್ರ ಉಟ್ಟು ಉತ್ತರೀಯ ಧರಿಸಿ, ಮುಂಡಾಸು ಹಾಗೂ ಮಾಲೆಯಿಂದ ಅಲಂಕೃತನಾಗುವುದು. ವಿಶೇಷ ಸಂಪ್ರದಾಯದಂತೆ ಅಲಂಕೃತನಾದ ವರನು ತುಳಸೀಸನ್ನಿಧಾನದಲ್ಲಿ ಕಲಶ-ಕನ್ನಡಿ ಹಿಡಿಯುವ ಭಗಿನಿಯೂ ಜೊತೆಗೆ ಕುಳಿತುಕೊಳ್ಳುವುದು. ನಾಲ್ಕು ಸುವಾಸಿನಿಯರು ಅಕ್ಷತೆಕಾಳು ಹಾಕಿ ನಾಲ್ಕು ಕುಂಭೋದಕವನ್ನು ಪ್ರೋಕ್ಷಣೆಮಾಡುವುದು. ಅನಂತರ ಮನೆಯೊಳಗೆ ದೇವರ ಮುಂದೆ ಬಾಸಿಂಗ ಕಟ್ಟಿಸಿಕೊಂಡು, ತಾಯಿ ಕೊಟ್ಟ ಹಾಲನ್ನು ಕುಡಿದು ದಂಡವನ್ನು ಧರಿಸಿ, ಬ್ರಾಹ್ಮಣರಿಂದಲೂ-ಬಂಧುವರ್ಗದವರಿಂದಲೂ ಪತಿಪುತ್ರವತೀ ಸುವಾಸಿನಿಯರಿಂದಲೂ ಕೂಡಿಕೊಂಡು, ಮಂಗಲಾಷ್ಟಕ-ಶಕುಂತಸೂಕ್ತಪಠನ, ವಾದ್ಯಘೋಷದೊಂದಿಗೆ ಅನುಕೂಲದಂತೆ ವಾಹನವೇರಿ, ಕಲಶಕನ್ನಡಿಯೇ ಮೊದಲಾದ ಮಂಗಲಶುಭದ್ರವ್ಯ ಪುರಸ್ಸರ ವಧೂಗೃಹಕ್ಕೆ ತೆರಳುವುದು. ವಧೂಗೃಹದ ಪ್ರಾಂಗಣದಲ್ಲಿ ಪೂರ್ವಾಭಿಮುಖನಾಗಿ ನಿಲ್ಲಲು, ಕದಿರಾರ್ತಿ, ಪೂರ್ಣಕುಂಭ-ಮಂಗಳದ್ರವ್ಯ-ಶಿರಕ್ಕೆ ಅರಳುಚೆಲ್ಲುವಿಕೆ ಇತ್ಯಾದಿ ಮರ್ಯಾದೆಯಿಂದ ಇದಿರುಗೊಳ್ಳಲ್ಪಟ್ಟವನಾಗಿ, ಪಾದಪ್ರಕ್ಷಾಳನೆ ಮಾಡಿಸಿಕೊಂಡು ಕನ್ಯಾಪಿತನಿಂದ ಹಸ್ತಲಾಘವಪೂರ್ವಕ ಗೃಹವನ್ನು ಪ್ರವೇಶಿಸಿ ಮಂಟಪದಲ್ಲಿ ಪೂರ್ವಾಭಿಮುಖನಾಗಿ ಕುಳಿತುಕೊಳ್ಳುವುದು. ಕನ್ಯಾಪಿತನು ಸಪತ್ನೀಕನಾಗಿ ವರನ ಜೊತೆಗೆ ಬಂದಿರುವ ಬಂಧುಗಳನ್ನು ಆಯಾಯಾ ಸ್ಥಾನದಲ್ಲಿ ಕುಳ್ಳಿರಿಸಿ ಯಥೋಚಿತವಾಗಿ ಉಪಚರಿಸುವುದು. ಅನಂತರ ಮಂಟಪಕ್ಕೆ ಬಂದು ವರನಿಗೆ ಬೀಸಣಿಗೆಯಿಂದ ಗಾಳಿ ಹಾಕಲು ವರನು ಕನ್ಯೆಯ ತಾಯಿಯು ಕೊಟ್ಟ ಹಾಲನ್ನು ಸಶೇಷ ಪಾನ ಮಾಡಿ, ಕನ್ಯಾಪಿತನನ್ನು ಕುರಿತು "ಕನ್ಯಾರ್ಥೀ" ಎನಲು ಆತನು "ಸ್ವಾಗತಮ್" ಎಂದು ಹೇಳಿ ವರನ ಕೈಯಲ್ಲಿರುವ ದಂಡವನ್ನು ತೆಗೆದುಕೊಂಡು ಮಂಟಪದ ಉತ್ತರಭಾಗದಲ್ಲಿಡಬೇಕು.

ವಾಗ್ದಾನ: ವಿವಾಹಕ್ಕಿಂತ ಮೊದಲೇ ಮಂತ್ರೋಕ್ತರೀತಿಯಲ್ಲಿ ವಾಗ್ದಾನವಾಗಿರಬೇಕು. ಆದರೆ ಈಗ ಮೊದಲು ಲೌಕಿಕರೀತಿಯಿಂದ ನಡೆಸಿ ವಿವಾಹದಿನವೇ ಸಮಂತ್ರಕವಾಗಿ ನಡೆಸುವುದು ರೂಢಿ. ಕನ್ಯಾಪಿತನು ಪತ್ನಿ ಹಾಗೂ ಕನ್ಯೆಯನ್ನು ತನ್ನ ದಕ್ಷಿಣದಲ್ಲಿ ಕುಳ್ಳಿರಿಸಿ, ಪೂರ್ವಾಭಿಮುಖನಾಗಿ ಕುಳಿತುಕೊಳ್ಳಲು, ವರನ ಮಾತಾಪಿತೃಗಳೂ, ಬಂಧುಗಳೂ ಪಶ್ಚಿಮಾಭಿಮುಖಿಗಳಾಗಿ ಕುಳಿತು ಈರ್ವರೂ ಸಂಕಲ್ಪಪೂರ್ವಕ ಗುರುಗಣೇಶಪೂಜೆ ಪ್ರಾರ್ಥನೆ ಮಾಡುವುದು. ಮೊದಲು ವರನ ಪಕ್ಷದವರು, ಗೋತ್ರೋಚ್ಚಾರಣಪೂರ್ವಕ ಪ್ರಪಿತಾಮಹ-ಪಿತಾಮಹ-ಪಿತೃಗಳ ಹೆಸರು ಹೇಳಿ ವರನಿಗೋಸ್ಕರ, ಕನ್ಯೆಯ ಗೋತ್ರ-ಪ್ರಪಿತಾಮಹ-ಪಿತಾಮಹ-ಪಿತೃವಿನ ಹೆಸರು



ಹೇಳಿ ಮಗಳನ್ನು ವರಿಸುವೆವು ಎನಲು ದಾತೃವು ಕೊಡುತ್ತೇನೆಂದು ಹೇಳಿ ವರನ ಪಿತನನ್ನು ಗಂಧ-ಅಕ್ಷತೆ-ಪುಷ್ಪಗಳಿಂದ ಸತ್ಕರಿಸಲು, ಕನ್ಯೆಯ ತಂದೆಯನ್ನು ಗಂಧಾದಿಗಳಿಂದ ವರನ ಪಿತನು ಸತ್ಕರಿಸಬೇಕು. ಬಳಿಕ ತಾಂಬೂಲ ಅಡಕೆಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುವುದು. ಸ್ವಸ್ತಿಕೆಯಲ್ಲಿ ಇಂದ್ರಾಣಿಯನ್ನು ಆವಾಹಿಸಿ ಪೂಜಿಸಿ ಪ್ರಾರ್ಥಿಸುವುದು. ಕನ್ಯೆಯೂ ಪ್ರಾರ್ಥಿಸಿ ನಮಸ್ಕರಿಸಲು ವರನ ಪಿತನು ಕನ್ಯೆಗೆ ಫಲಕೊಡಬೇಕು. ವಿಪ್ರರಿಗೆ ತಾಂಬೂಲ ದಕ್ಷಿಣೆ ಕೊಟ್ಟು ಅವರಿಂದ ಕನ್ಯೆಗೆ ಆಶೀರ್ವಚನ ಮಾಡಿಸುವುದು. ಅನಂತರ ಉಭಯಪಕ್ಷದವರೂ ಪುಣ್ಯಾಹವಾಚನ ಮಾಡುವುದು. ವರಪಕ್ಷೀಯ ಉತ್ತರೀಯ ವಸ್ತ್ರದಲ್ಲಿ ವಾಗ್ದಾನಕ್ರಮದಂತೆ ಉಭಯಪಕ್ಷದ ಗೋತ್ರ-ನಾಮೋಚ್ಚಾರಣ ಸಹಿತ, ಅರಸಿನದ ಬೇರು, ಇಡಿ ಅಡಕೆ ಅಕ್ಷತೆಗಳನ್ನು ನಾಲ್ಕು ವಿಪ್ರರು ಪರಸ್ಪರ ಹಸ್ತಾಂತರಮಾಡಿ ಹಾಕಿ ಗ್ರಂಥಿ ಮಾಡುವುದು. ವರನನ್ನು ಕನ್ಯೆಯ ಮಾತಾಪಿತೃಗಳು ಮಧುಪರ್ಕಪೂಜೆಯಿಂದ ಸತ್ಕರಿಸುವುದು. ನೂತನ ವಸ್ತ್ರ ಧರಿಸಿದ ಕನ್ಯಾ-ವರರನ್ನು ತುಳಸೀಸನ್ನಿಧಿಯಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಕುಂಭೋದಕ ಪ್ರೋಕ್ಷಣೆ ಮಾಡುವುದು. ಇಂದ್ರಾಣಿದೇವಿಗೆ ಸಮರ್ಪಿಸಿದ ಮಂಗಲಸೂತ್ರವನ್ನು ಕನ್ಯೆಗೆ ಸುವಾಸಿನಿಯರು ಹಾಕಿ ಕಾಲುಂಗರ ಹಾಕಿ ಗೋತ್ರೋಚ್ಚಾರಣ ಗ್ರಂಥಿ ಮಾಡಿದ ಉತ್ತರೀಯವನ್ನು ಧರಿಸಿ ಸ್ತ್ರೀ ಬಾಸಿಂಗವನ್ನು ಕಟ್ಟಿ ಕನ್ಯೆಯನ್ನು ಅಲಂಕರಿಸುವುದು.

ಮಂಟಪದ ಉತ್ತರಭಾಗದಲ್ಲಿ ಪೂರ್ವ-ಪಶ್ಚಿಮವಾಗಿ ಎರಡು ಪದ್ಮಗಳನ್ನು ಬರೆದು ಪ್ರಸ್ಥ ಪರಿಮಿತ ಅಕ್ಕಿ ಹಾಕಿ-ಮಧ್ಯೇ ಉತ್ತರಕ್ಕೆ ಅಂಚು ಇರುವಂತೆ ಬಿಳಿವಸ್ತ್ರವನ್ನು ಅಡ್ಡವಾಗಿ ಹಿಡಿಯಬೇಕು. ಪೂರ್ವರಾಶಿಯಲ್ಲಿ ವರನು ದಂಡಪಾಣಿಯಾಗಿ ಪಶ್ಚಿಮಕ್ಕೆ ಮುಖವಾಗಿ ನಿಲ್ಲಲು, ಕನ್ಯೆಯನ್ನು ಕರೆದುಕೊಂಡುಬಂದು ಪಶ್ಚಿಮರಾಶಿಯಲ್ಲಿ ಪೂರ್ವಾಭಿಮುಖಿಯಾಗಿ ನಿಲ್ಲಿಸಬೇಕು. ವಧೂವರರು ಇಷ್ಟದೇವತೆಯನ್ನು ಮನಸಾ ಸ್ಮರಿಸುತ್ತಿರಬೇಕು. ವಿಪ್ರರು ಮಂಗಲಾಷ್ಟಕ ಪಠಿಸುತ್ತಿರಲು, ಮಂಗಳವಾದ್ಯಘೋಷ ಮೊಳಗುತ್ತಿರಲು ಅಂತಃಪಟವನ್ನು ಶಿಥಿಲಮಾಡಲು ವಧುವು ವರನಿಗೆ ಅಕ್ಷತೆಕಾಳು ಹಾಕಿ ಎರಡು ಕೈಗಳಿಂದ ಕೊರಳಿಗೆ ಮಾಲೆಯನ್ನು ಹಾಕುವುದು. ವರನೂ ಬಲದ ಕೈಯಿಂದ ವಧುವಿಗೆ ಅಕ್ಷತೆಕಾಳು ಹಾಕಿ ಮಾಲೆಯನ್ನು ಕೊರಳಿಗೆ ಹಾಕುವುದು. ಸಭಾಸದರು ವಧೂವರರಿಗೆ ಅಕ್ಷತೆಕಾಳು ಹಾಕುವುದು. ವರನು ವಧುವಿನ ಮುಖವನ್ನು ನೋಡುತ್ತಾ ಎರಡೆಸಳು ದರ್ಭಾಗ್ರದಿಂದ ಆಕೆಯ ಭ್ರೂಮಧ್ಯಕ್ಕೆ ಸ್ಪರ್ಶಮಾಡಿ ಬಿಸಾಡಿ ಕೈತೊಳೆದು ಪ್ರದಕ್ಷಿಣೆಯಾಗಿ ವಧೂವರರನ್ನು ವ್ಯತ್ಯಸ್ತವಾಗಿ ಪೂರ್ವ-ಪಶ್ಚಿಮಾಭಿಮುಖವುಳ್ಳವರನ್ನಾಗಿ ಮಾಡಿ, ಕನ್ಯೆಯ ಮಾತಾಪಿತೃಗಳು ಕುಳಿತು ಕನ್ಯಾದಾನಾಂಗ ಸಂಕಲ್ಪಮಾಡಿ, ಕಲಶಾರಾಧನೆ ಮಾಡುವುದು. ಉತ್ತರಾಭಿಮುಖನಾಗಿ ನಿಂತು ಕನ್ಯೆಯ ಅಂಜಲಿಯ ಮೇಲೆ ವರಾಂಜಲಿಯನ್ನಿಟ್ಟು ಅದರ ಮೇಲೆ ಕನ್ಯಾಪಿತನು ತನ್ನ ಕೈಯಿಟ್ಟು ಕುಶಾಕ್ಷತೆ ಹಿಡಿದುಕೊಂಡು ಬಲಭಾಗದಲ್ಲಿ ನಿಂತಿರುವ ಪತ್ನಿಯಿಂದ ಕಲಶೋದಕ ಧಾರೆಯಾಗಿ ಸುರಿಸಿಕೊಂಡು ಗೋತ್ರೋಚ್ಚಾರಣಪೂರ್ವಕ ದಾನ ಮಾಡಬೇಕು. ವರನು ಕನ್ಯೆಯ ಬಲ ಹೆಗಲು ಮುಟ್ಟಿಕೊಂಡು ಕನ್ಯೆಯನ್ನು ಸ್ವೀಕರಿಸಬೇಕು. ಗೃಹ್ಯಸೂತ್ರಪ್ರಕಾರ: ಹಾರಹಾಕುವುದಕ್ಕಿಂತ ಮೊದಲು ಪರಸ್ಪರ ಗುಡ-ಜೀರಿಗೆ-ಅಕ್ಷತೆಗಳನ್ನು

ಹಾಕುವುದು. ಅನಂತರ ಕನ್ಯಾದಾನ, ಬಳಿಕ ವಧೂವರರು ತೋಯಿಸಿದ ಅಕ್ಕಿಯನ್ನು ಪರಸ್ಪರವಾಗಿ ತಲೆಗೆ ಅಂಜಲಿಯಿಂದ ಹಾಕುವುದು. ಹಾಗೂ ಕೌತುಕಸೂತ್ರವನ್ನು ಪರಸ್ಪರವಾಗಿ ಮಣಿಗಂಟಿಗೆ ಕಟ್ಟುವುದು. ಹಾಗೂ ವಧೂವರರು ಮಾಲೆ ಹಾಕುವುದು. ವರನು ವಧುವಿನ ಕೊರಳಿಗೆ ಮಂಗಲಸೂತ್ರವನ್ನು ಕಟ್ಟುವುದು. ಇವು ಶೌನಕೀಯ ಪ್ರಕಾರ ಉಲ್ಲೇಖವಿದ್ದಂತಿಲ್ಲ. ಬಳಿಕ ವಧೂವರರು ಪೂರ್ವಾಭಿಮುಖವಾಗಿ ಹಸೆಮಣೆಯಲ್ಲಿ ಕುಳಿತು ವಿವಾಹಹೋಮಾಂಗ ಸಂಕಲ್ಪಮಾಡುವುದು. ಕನ್ಯೆಯ ತಾಯಿಯು ತಂದ ಅಗ್ನಿಯನ್ನು ಪ್ರತಿಷ್ಠಾಪಿಸಿ, ಯೋಜಕನಾಮಾಗ್ನಿಯೆಂದು ಪ್ರಜ್ವಲಿಸಿ ಅನ್ವಾಧಾನ ಮಾಡುವುದು. ಪಾತ್ರಾಸಾದನ ಸಂದರ್ಭ ಅರಳು ತುಂಬಿದ ಶೂರ್ಪ, ಚಪ್ಪಟೆಯಾದ ಒಂದು ಕಲ್ಲು ಇನ್ನೊಂದು ಗುಂಡುಕಲ್ಲು ಸಂಗ್ರಹಿಸಬೇಕು. ಪ್ರಧಾನಹೋಮವನ್ನು ಮುಗಿಸಿ ವರನು ಪಶ್ಚಿಮಾಭಿಮುಖನಾಗಿ ಕುಳಿತಿರುವ ವಧುವಿನ ಅಂಗುಷ್ಠಸಹಿತ ಪಾಣಿಗ್ರಹಣಮಾಡಲು ವಧು ಎದ್ದು ವರನ ಉತ್ತರಭಾಗದಲ್ಲಿ ನಿಲ್ಲುವುದು. ವರನು ಆಕೆಯ ಅಂಜಲಿ ಜೋಡಿಸಿ ಅಭಿಘಾರಮಾಡಿ ಎರಡುಸಲ ಅರಳುಹಾಕಿಸಿ ಪುನಃ ಅಭಿಘಾರಮಾಡಿ, ಪಾತ್ರೆಯ ಅರಳನ್ನು ಅಭಿಘಾರಮಾಡಿ ಆಕೆಯ ಅಂಜಲಿಯನ್ನು ಒಡೆದು ಅಂಗುಲಿಯ ತುದಿಗಳಿಂದ ಅಗ್ನಿಗೆ ಆಹುತಿ ಕೊಡುವುದು, ಬಳಿಕ ವರನು ಮುಂದೆಹೋಗುತ್ತಾ ವಧುವನ್ನು ಹಿಂದಿನಿಂದ ಬರುವಂತೆ ಅಗ್ನಿಗೆ ಪ್ರದಕ್ಷಿಣೆ ಮಾಡಿಸಿ, ವಧುವನ್ನು ಪೂರ್ವಾಭಿಮುಖವಾಗಿ ನಿಲ್ಲಿಸಿ ಶಿಲೆಯನ್ನು ಬಲ-ಎಡ ಕಾಲುಗಳಿಂದ ಆರೋಹಣ ಮಾಡಿಸಬೇಕು. ಹೀಗೆ ಮೂರು ಪ್ರದಕ್ಷಿಣೆ, ಲಾಜಹೋಮ-ಶಿಲಾರೋಹಣ ನಡೆಸಿ ನಾಲ್ಕನೇ ಆಹುತಿಯಾಗಿ ಪ್ರಜಾಪತಿಗೆ ಅರಳು ವಿಶೇಷವಾಗಿ ಹೋಮ ಮಾಡಬೇಕು. ಅಗ್ನಿಯ ಉತ್ತರಭಾಗದಲ್ಲಿ ಪಶ್ಚಿಮದಿಂದ ಪೂರ್ವಕ್ಕೆ ಏಳು ಅಕ್ಕಿರಾಶಿಗಳನ್ನು ಮಾಡಿ ತಾನು ಮುಂದಕ್ಕೆ ಪಶ್ಚಿಮಾಭಿಮುಖವಾಗಿ ನಿಂತು ವಧುವನ್ನು ಕೈಹಿಡಿದುಕೊಂಡು ಪಶ್ಚಿಮಾದಿ ಒಂದೊಂದು ಹೆಜ್ಜೆಯಿಂದ ಅಕ್ಕಿರಾಶಿಯನ್ನು ದಾಟಿಸುತ್ತಾ ಸಪ್ತಪದಿಯಿಂದ ಸಮೀಪಕ್ಕೆ ನಿಲ್ಲಿಸಿ ಇಬ್ಬರೂ ಶಿರವನ್ನು ಜೋಡಿಸಬೇಕು. ಕನ್ಯಾಪಿತನು ಕನ್ನಡಿಯ ಮಾಧ್ಯಮವಾಗಿ ಶುದ್ಧ ಕಲಶೋದಕವನ್ನು ಧಾರಾಕಾರವಾಗಿ ಸುರಿಯಬೇಕು. ದಂಪತಿಗಳು ಅರುಂಧತಿಯನ್ನು ಸ್ಮರಿಸುತ್ತಾ ಮೊದಲಿನಂತೆ ಕುಳಿತುಕೊಳ್ಳುವುದು.

ವರನು ಕನ್ಯೆಯ ಕೊರಳಿಗೆ ಮಂಗಲಸೂತ್ರವನ್ನು ಕಟ್ಟುವುದು. ಉಭಯಪಕ್ಷದ ನಾಲ್ಕು ಸುವಾಸಿನಿಯರು ವಧೂವರರಿಗೆ ನೀರಾಜನ ಮಾಡಬೇಕು. ಅನಂತರ ವಧೂವರರು ಎದ್ದು ಅಭಿಮುಖವಾಗಿ ನಿಲ್ಲಲು ಉಭಯಪಕ್ಷದ ಸುವಾಸಿನಿಯರು ದಕ್ಷಿಣ-ಉತ್ತರ ದಿಕ್ಕುಗಳಲ್ಲಿ ಅಭಿಮುಖವಾಗಿ ನಿಂತು ನೂತನ ಚಾಪೆಯನ್ನು ಬಿಡಿಸಲು ವರನು ಅಕ್ಷತೆಸಹಿತ ಉಂಗುರವನ್ನು ಚಾಪೆಗೆ ಹಾಕುವುದು. ಸುವಾಸಿನಿಯರು ಆ ಉಂಗುರವನ್ನು ಹುಡುಕಬೇಕು. ಹೀಗೆ ಮೂರುಸಾರಿ ಆಟವಾದ ಮೇಲೆ ವಧೂ ವರರು ಚಾಪೆಯಲ್ಲಿ ಕುಳಿತುಕೊಂಡು ಆ ಉಂಗುರವನ್ನು ವರನು ವಧುವಿನ ಕೈಬೆರಳಿಗೆ ಹಾಕುವುದು. ಅನಂತರ ಗೃಹಪ್ರವೇಶ ಹೋಮವನ್ನು ಮಾಡುವುದು. ಈ ಹೋಮವನ್ನು ವರನು ತನ್ನ ಮನೆಯಲ್ಲಿ ವಧೂಗೃಹಪ್ರವೇಶವಾದ ಅನಂತರ ನಡೆಸಬೇಕು. ಆದರೆ ಇಂದು ವಿವಾಹಮಂಟಪದಲ್ಲೇ ಆಚರಿಸುವುದು ವಾಡಿಕೆಯಾಗಿದೆ. ಆದುದರಿಂದ ವಿವಾಹಹೋಮ ಅನ್ವಾಧಾನದಲ್ಲಿ ಹೇಳಿದಂತೆ ಸೂರ್ಯಾಸಾವಿತ್ರಿಯನ್ನು ಉದ್ದೇಶಿಸಿ ಆಜ್ಯದಿಂದ ನಾಲ್ಕು



ಆಹುತಿ ನೀಡಿ ಆಜ್ಯಶೇಷವನ್ನು ವರನು ತನ್ನ ಹೃದಯಕ್ಕೆ ಹಚ್ಚಿ, ಪತ್ನಿಯ ಹೃದಯ(ಕಂಠ)ಕ್ಕೂ ಹಚ್ಚಬೇಕು. ಅನಂತರ ಪ್ರಾಯಶ್ಚಿತ್ತಾದಿ ಹೋಮಶೇಷ ಮುಕ್ತಾಯಗೊಳಿಸಿ ಬ್ರಹ್ಮ ಹಾಗೂ ಪುರೋಹಿತರಿಗೆ ತಾಂಬೂಲ ದಕ್ಷಿಣೆ ಕೊಟ್ಟು ಆಶೀರ್ವಾದ ಪಡೆದು ಕೃಷ್ಣಾರ್ಪಣ ಬಿಡುವುದು.

ದೇಶಾಚಾರಪ್ರಕಾರ ಕನ್ಯಾದಾನವಾದ ಮೇಲೆ ವರನು "ಯತ್ತಕ್ಷೀವಾಂಸಂ......" ಎಂಬ ಮಂತ್ರದಿಂದ ವಧುವಿನ ಹೊಟ್ಟೆಯ ಬಲಪಾರ್ಶ್ವವನ್ನು ಸ್ಪರ್ಶಮಾಡಬೇಕು. ಪುರೋಹಿತನು ಅಭಿಮಂತ್ರಿತ ಕಲಶೋದಕವನ್ನು ಪಲ್ಲವಗಳಿಂದ ವಧೂವರರಿಗೆ ಪ್ರೋಕ್ಷಿಸಬೇಕು. ವಧೂವರರು ಅಭಿಮುಖವಾಗಿ ಕುಳಿತುಕೊಳ್ಳುವುದು. ಹಾಲಿನಲ್ಲಿ ಅದ್ದಿದ ಬಿಳಿನೂಲನ್ನು ದಂಪತಿಗಳ ಕಂಠದೇಶ ಹಾಗೂ ಕಟಿಪ್ರದೇಶಕ್ಕೆ ಈಶಾನ್ಯದಿಂದಾರಂಭಿಸಿ ನಾಲ್ಕು ಅಥವಾ ಐದು "ಪರಿತ್ವಾಗಿರ್ವಣೋ........." ಎಂಬ ಮಂತ್ರದಿಂದ ಸುತ್ತುವರಿದು ಕಂಠದೇಶದ ನೂಲನ್ನು ಕೆಳಗಿನಿಂದಲೂ ಕಟಿದೇಶದ ನೂಲನ್ನು ಮೇಲಿನಿಂದಲೂ ತೆಗೆದು ಎರಡಕ್ಕೂ ಹಳದಿ ಬೇರು ಕಟ್ಟಿ ಕುಂಕುಮ ಲೇಪಿಸಿ ಕೆಳಗಿನಿಂದ ತೆಗೆದ ನೂಲನ್ನು ವರನು "ನೀಲಲೋಹಿತಂ........." ಎಂಬ ಮಂತ್ರದಿಂದ ವಧುವಿನ ಎಡದ ಮಣಿಗಂಟಿಗೂ, ವಧುವು ಮೇಲಿಂದ ತೆಗೆದ ನೂಲನ್ನು ವರನ ಬಲದ ಮಣಿಗಂಟಿಗೂ ಕಟ್ಟಬೇಕು. ಇದನ್ನು ಕಂಕಣಬಂಧನವೆನ್ನುತ್ತಾರೆ.

ಅಕ್ಷತಾರೋಪಣ: ವಧೂವರರು ಕೈತೊಳೆದುಕೊಂಡು ತುಪ್ಪ ಮಿಶ್ರ ಮಾಡಿದ ಹಾಲನ್ನು ವರನು ವಧುವಿನ ಅಂಜಲಿಗೆ ಎರಡು ಸಾರಿ ಸವರುವುದು. ತೋಯಿಸಿದ ಅಕ್ಕಿಯನ್ನು ಆಕೆಯ ಅಂಜಲಿಗೆ ಎರಡು ಸಾರಿ ಹಾಕುವುದು. ಇನ್ನೊಬ್ಬರು ವರನ ಅಂಜಲಿಯನ್ನು ತುಪ್ಪ ಮಿಶ್ರ ಮಾಡಿದ ಹಾಲು ಸವರಿ ತೋಯಿಸಿದ ಅಕ್ಕಿಯನ್ನು ಎರಡು ಸಾರಿ ಹಾಕುವುದು. ಕನ್ಯಾದಾತೃವು ದಂಪತಿಗಳ ಅಂಜಲಿಸ್ಥ ಅಕ್ಕಿಯ ಮೇಲೆ ಹಿರಣ್ಯವನ್ನು ಇಡುವುದು. ವಧುವು ಎದ್ದು ನಿಂತು "ಭಗೋ ಮೇ ಕಾಮಃ ಸಮೃದ್ಧ್ಯತಾಮ್" ಎಂದು ವರನ ತಲೆಯ ಮೇಲೆ ಸುರಿಯಬೇಕು. ವರನೂ "ಯಜ್ಞೋ ಮೇ ಕಾಮಃ ಸಮೃದ್ಧ್ಯತಾಮ್" ಎಂದು ವಧುವಿನ ಶಿರದ ಮೇಲೆ ಸುರಿಯುವುದು. ಹೀಗೆ ಇನ್ನೆರಡು ಸಲ ಮಾಡಬೇಕು. ಮಂತ್ರಗಳಲ್ಲಿ ವ್ಯತ್ಯಾಸಗಳಿವೆ. ಅನಂತರ ದಂಪತಿಗಳು ಹೂವನ್ನು ಹಾಲಿನಲ್ಲಿ ಅದ್ದಿ ಪರಸ್ಪರ ತಿಲಕಧಾರಣೆ ಮಾಡಿ ಪರಸ್ಪರ ಮಾಲಾರ್ಪಣೆ ಮಾಡಿಕೊಳ್ಳಬೇಕು. ಅಲ್ಲೇ ವರನು ವಧುವಿನ ಕಂಠಕ್ಕೆ ಮಂಗಲಸೂತ್ರ ಬಂಧಿಸುವುದು. ಅರಸಿನ ತುಂಡು, ಐದು ಅಡಕೆ ಮತ್ತು ಹಣ ಇವುಗಳನ್ನಿಟ್ಟು ಗಣಪತಿ ಪೂಜೆ ಮಾಡಿ ದಂಪತಿಗಳ ಸೆರಗಿನ ತುದಿಗೆ ಗಂಟುಕಟ್ಟಬೇಕು. ಬಳಿಕ ವಿವಾಹಹೋಮ, ಸಪ್ತಪದಿ. ಇವಿಷ್ಟು ವಿಶೇಷ.

ಅವಭೃಥ ಸ್ನಾನ ಸಂದರ್ಭ: ಪಂಚವರ್ಣಗಳಿಂದ ಸರೋವರ, ಮಧ್ಯೆ ಕಮಲಾದಿ ಹೂಗಳು, ಹಂಸಾದಿ ಪಕ್ಷಿಗಳನ್ನು ರಚಿಸಿ, ಸರಸ್ಸಿನ ನೈಋತ್ಯ ಭಾಗದಲ್ಲಿ ಅಕ್ಕಿ ಹಾಗೂ ಉಪ್ಪುಗಳನ್ನು ನೆಲದಲ್ಲಿ ಹರಡಿ ಅಭಿಮುಖಿಗಳಾಗಿರುವಂತೆ ಎರಡು ಆನೆಗಳನ್ನು ತಯಾರಿಸಬೇಕು.

ಸರೋವರದ ಸುತ್ತಲೂ ಬ್ರಹ್ಮಾದಿ ತ್ರಿಮೂರ್ತಿಗಳನ್ನೂ ಬ್ರಾಹ್ಮ್ಯಾದಿ ಸಪ್ತಮಾತೃದೇವತೆಗಳನ್ನೂ ಅಷ್ಟದಿಗ್ಗಜಗಳನ್ನೂ ಭೈರವಾದಿ ರಕ್ಷಣದೇವತೆಗಳನ್ನೂ ಇಂದ್ರಾದಿ ಲೋಕಪಾಲರನ್ನೂ ಆವಾಹಿಸಿ ಪೂಜಿಸಬೇಕು. ವಧುವಿನ ತಾಯಿಯು ಅನ್ನ-ಅಪೂಪ-ಭಕ್ಷ್ಯ-ಫಲವಸ್ತುಗಳನ್ನೂ ದೀಪಸಹಿತ ತಲೆಯಲ್ಲಿಟ್ಟುಕೊಂಡು ವಧೂವರರೊಂದಿಗೆ ಸರೋವರಕ್ಕೆ ಪ್ರದಕ್ಷಿಣೆ ಬರಬೇಕು. ಬಳಿಕ ದಂಪತಿಗಳು ಮಾತ್ರ "ಆ ತೂ ನ ಇಂದ್ರ ಕ್ಷುಮಂತಂ........" ಎಂಬ ಮಂತ್ರದಿಂದ ಎರಡು ಆನೆಗಳ ಸಮೀಪ ಅಭಿಮುಖಿಗಳಾಗಿ ನಿಂತು ಜಲಕ್ರೀಡಾಮಯ ಸನ್ನಿವೇಶ ಚಿಂತಿಸಿ ಪರಸ್ಪರ ಆನೆಗಳನ್ನು ವಿನಿಮಯಗೊಳಿಸುತ್ತಿರಲು ವರನು ನೀಲಮಣಿಹಾರವನ್ನು "ನೀಲಲೋಹಿತಂ........" ಎಂಬ ಮಂತ್ರದಿಂದ ವಧುವಿನ ಕೊರಳಿಗೆ ಕಟ್ಟಬೇಕು.

ಇಂತಹ ಕೆಲವೊಂದು ವಿಶೇಷತೆಗಳು ಗೃಹ್ಯಪರಿಶಿಷ್ಟ, ಸಮುಚ್ಚಯ, ಪಾರಿಜಾತಗಳಲ್ಲೂ ಇರುವುದರಿಂದ ವಿಹಿತವೆನಿಸಿದರೂ ಈ ಪ್ರಾಂತ್ಯದಲ್ಲಿ ಕೆಲವು ವರ್ಗಗಳಲ್ಲಿ ಮಾತ್ರವಿದ್ದು ಹೆಚ್ಚಿನವರಲ್ಲಿ ರೂಢಿಗೆ ಬಂದಿಲ್ಲ.

**ಆಚಾರವಿಶೇಷ-** ವಧು ಎದ್ದು ಪತಿಗೆ ಅಕ್ಷತೆಕಾಳು ಹಾಕಿ ನಮಸ್ಕರಿಸಿ ಪತಿಯ ಪಾದಗಳನ್ನು ತೊಳೆದು ಆ ಜಲವನ್ನು ತನ್ನ ಶಿರಸ್ಸಿಗೆ ಪ್ರೋಕ್ಷಿಸಿಕೊಳ್ಳಬೇಕು. ಎರಡು ಕೈಗಳಲ್ಲಿ ಅರಸಿನ ಚೂರ್ಣವನ್ನು ನೀರಿನಿಂದ ಕಲಸಿ, ವರನ ಕಪೋಲಗಳಿಗೆ, ಕೈಅಂಜಲಿಯ ಪೃಷ್ಠ(ಅಂಗೈಯ ಹಿಂಬದಿ)ಗಳಿಗೆ, ಪಾದಗಳಿಗೆ ಲೇಪಿಸಿ ಕೈತೊಳೆದು ಪನ್ನೀರು-ಗಂಧ-ಅಕ್ಷತೆಗಳಿಂದ ಯಥೋಚಿತ ಉಪಚಾರ ಮಾಡಿ ತಾಂಬೂಲ ತನಗೆ ಅಗ್ರವಾಗಿರುವಂತೆ ಕೊಟ್ಟು ನಮಸ್ಕರಿಸಿ ವರನ ಬಲಭಾಗದಲ್ಲಿಯೇ ಕುಳಿತುಕೊಳ್ಳುವುದು. ವರನ ಭಗಿನಿಯು ವಧುವಿನ ಪಾದ ತೊಳೆಯುವುದು. ವರನು ಬಲದ ಕೈಯಲ್ಲಿ ಜಲಮಿಶ್ರಿತ ಅರಶಿನ ಚೂರ್ಣವನ್ನು ಪತ್ನಿಯ ಕಪೋಲಗಳಿಗೂ ಕೈಗಳಿಗೂ ಲೇಪಿಸಿ, ಪನ್ನೀರು-ಗಂಧ-ಹೂಗಳಿಂದ ಉಪಚರಿಸಿ ತಾಂಬೂಲ ಕೊಡುವುದು. ಉಭಯಪಕ್ಷದ ನಾಲ್ಕು ಸುವಾಸಿನಿಯರು ವಧೂವರರಿಗೆ ನೀರಾಜನ ಮಾಡುವುದು. ದಂಪತಿಗಳು ಎದ್ದುನಿಲ್ಲಲು ಹಿಡಿಸಿದ ಚಾಪೆಯನ್ನು ಮಡಚಿಡುವುದು.

ದಂಪತಿಗಳು ಪ್ರಾಂಗಣಕ್ಕೆ ಹೋಗಿ ಪೂರ್ವಪಶ್ಚಿಮಾಭಿಮುಖಿಗಳಾಗಿ ನಿಲ್ಲಲು ಮಧ್ಯೇ ದೊಡ್ಡ ಪಾತ್ರೆಯಲ್ಲಿ ನೀರು ತುಂಬಿಸಿ ಓಕುಳಿ ತಯಾರಿಸುವುದು. ವಧೂವರರು ಅಕ್ಷತೆಕಾಳು ಹಾಕಿ, ಪ್ರದಕ್ಷಿಣೆ ಬಂದು ಆ ನೀರನ್ನು ಪರಸ್ಪರ ಪ್ರೋಕ್ಷಿಸಿಕೊಳ್ಳುವುದು. ಇಲ್ಲಿಯೂ ಉಂಗುರ ಹಾಕಿ ವಧೂವರರೇ ಹುಡುಕುವ ವಿಧಾನ ಕೆಲವೆಡೆ ಇದೆ. ಅವಭೃಥಸ್ನಾನಾಂಗ ಪ್ರೋಕ್ಷಣೆ ಮಾಡಿಕೊಂಡು ವರನು ಕೈಯಲ್ಲಿದ್ದ ದಂಡವನ್ನು ಅಲ್ಲೇ ಬಿಟ್ಟು ಶಿರದ ಬಾಸಿಂಗವನ್ನು, ವಧುವು ತನ್ನ ಉತ್ತರೀಯ ಮತ್ತು ಬಾಸಿಂಗವನ್ನು ವಿಸರ್ಜಿಸುವುದು. ವಧೂವರರ ಬಾಸಿಂಗಗಳನ್ನು ಕನ್ಯೆಯ ಗೃಹದಲ್ಲಿ ಕಟ್ಟುವ ಪದ್ಧತಿ ಇದೆ. ಅನಂತರ ಕಲಶಗ್ರಹಣ ಆಚರಿಸುವುದು.



**ಔಪಾಸನವಿಧಿ -** ಕಲಶಗ್ರಹಣಸಂದರ್ಭದಲ್ಲಿ ಪತ್ನಿಯು ಶೂರ್ಪದಿಂದ ಶೋಧಿಸಿದ ತಂಡುಲದಿಂದ ಔಪಾಸನಮಾಡುವುದು. ಉಪನಯನದಲ್ಲಿ ಅಗ್ನಿಕಾರ್ಯವನ್ನು ಬ್ರಹ್ಮಚಾರಿ ಬೆಳಗ್ಗೆ ಪ್ರಾರಂಭಿಸಿದರೆ ಗೃಹಸ್ಥನು ಪ್ರಥಮ ಔಪಾಸನವನ್ನು ಸಾಯಂಕಾಲ ಪ್ರಾರಂಭಿಸುವುದು ವೈಶಿಷ್ಟ್ಯವೆನಿಸಿದೆ. ವಿವಾಹಾಗ್ನಿ(ಯೋಜಕಾಗ್ನಿ)ಯನ್ನು ಪ್ರಾರ್ಥಿಸುವುದು. ಪತ್ನಿಯು ಎರಡು ಆಹುತಿಗೆ ಸಾಕಷ್ಟು ಅಕ್ಕಿಯನ್ನು ಪಾತ್ರೆಗೆ ಹಾಕಿ ನೀರಿನಿಂದ ತೊಳೆದು ಉತ್ತರಭಾಗದಲ್ಲಿಡುವುದು. ವರನು ಒಂದು ಸಮಿಧೆಯನ್ನು ತೊಳೆದ ಅಕ್ಕಿಯ ಮೇಲಿಟ್ಟು ಜ್ವಲಿಸುವ ದರ್ಭೆಗಳನ್ನು ಮೂರು ಬಾರಿ ಪ್ರದಕ್ಷಿಣವಾಗಿ ಸುತ್ತಿಸಿ ಅಗ್ನಿಗೆ ಹಾಕಿ ಕೈತೊಳೆಯುವುದು. ಆ ಸಮಿಧೆಯನ್ನು ಅಮಂತ್ರಕವಾಗಿ ಅಗ್ನಿಗೆ ಹಾಕಿ, ಪತ್ನಿಯ ಅಂಜಲಿಯನ್ನು ಅಭಿಘಾರ ಮಾಡುವುದು. ತಂಡುಲವನ್ನು ಪತ್ನಿಯ ಕೈಗೆ ಹಾಕಿ ಅಭಿಘಾರ ಮಾಡಬೇಕು. ಪತ್ನಿಯು ಎರಡು ಪಾಲು ಮಾಡಿ ಬಲದ ಕೈಯ ತಂಡುಲವನ್ನು ಪತಿಗೆ ಕೊಡಲು ಪತಿಯು ಎಡದ ಕೈಯನ್ನು ಎದೆಯಲ್ಲಿಟ್ಟು "ಅಗ್ನಯೇ ಸ್ವಾಹಾ" ಎಂದು ಆಹುತಿ ಕೊಟ್ಟು, ಇನ್ನೊಂದು ಪಾಲನ್ನು ಪತ್ನಿಯ ಬಲಕೈಯಿಂದ ಪಡೆದು "ಪ್ರಜಾಪತಯೇ ಸ್ವಾಹಾ" ಎಂದು ಆಹುತಿ ಕೊಡಬೇಕು. ಅನಂತರ ಅಗ್ನ್ಯುಪಸ್ಥಾನಪೂರ್ವಕ ನಮಸ್ಕರಿಸಿ ಕೃಷ್ಣಾರ್ಪಣ ಮಾಡುವುದು.

(ಪ್ರಾತಃಕಾಲ ಔಪಾಸನ ಸಂದರ್ಭದಲ್ಲಿ ಸೂರ್ಯ ಹಾಗೂ ಪ್ರಜಾಪತಿಗೆ ಆಹುತಿ ನೀಡಬೇಕು.)

ಸಂಪ್ರದಾಯದಂತೆ ಭೋಜನವಾದ ಮೇಲೆ ವಧೂವರರೂ ಕನ್ಯಾಮಾತಾಪಿತೃಗಳೂ ವರನ ಮಾತಾಪಿತೃಗಳೂ ಸಾಲಾಗಿ ಕುಳಿತು ಕೊಳ್ಳಲು, ಸುವಾಸಿನಿಯರು ನೀರಾಜನ ಮಾಡುವುದು. ವಿಪ್ರರು ವೇದೋಕ್ತ ಮಂತ್ರಗಳನ್ನು ಪಠಿಸಿ ಸ್ವಸ್ತಿವಾಚನಪೂರ್ವಕ ಆಶೀರ್ವಾದ ಮಾಡಬೇಕು. ಅನಂತರ ವಧುವನ್ನು ಮಾತಾಪಿತೃಗಳು ವರನ ಮಾತಾಪಿತೃಗಳ ಸ್ವಾಧೀನಕ್ಕೆ ಯಥೋಚಿತ ವಚನಗಳಿಂದ ಒಪ್ಪಿಸುವುದು.

ಬಳಿಕ ವಿಪ್ರರಿಗೆ ಹೊರತುಪಡಿಸಿ ಶುಭಸಮಯದಲ್ಲಿ ವರನು ವಧುವನ್ನು ಕರೆದುಕೊಂಡು ಬಂಧುಗಳೊಂದಿಗೆ ತನ್ನ ಮನೆಗೆ ಪ್ರವೇಶಿಸಲು, ತೋರಣ ಬಾಗಿಲಲ್ಲಿ ಕದಿರಾರ್ತಿ ಮಾಡಿಸಿಕೊಂಡು ಬಲಕಾಲು ಮುಂದುಮಾಡಿ ಒಳಪ್ರವೇಶಿಸಿ ದೇವರಿಗೂ-ಮಾತಾಪಿತೃ ಗಳಿಗೂ ನಮಸ್ಕರಿಸುವುದು. ತಾಯಿ ನೀಡಿದ ಹಾಲು ಕುಡಿದು, ತನ್ನ ಸಂಬಂಧಿ, ಬಂಧುಗಳನ್ನು ವಧುವಿಗೆ ಪರಿಚಯಿಸುತ್ತಾ ಹಿರಿಯರಿಂದ ಆಶೀರ್ವಾದ ಪಡೆಯುವುದು.

ಇಲ್ಲಿಗೆ ವಿವಾಹಪ್ರಯೋಗವು ಮುಕ್ತಾಯವಾಗುವುದು.

---

## ಗಣಪತಿಸ್ತೋತ್ರಮ್

ಹೇರಂಬ ಕುಂಭಲಸಿತಾಮರಕುಂಕುಮಾಂಕ ಮಾರಾರಿಪುತ್ರ ಕರಿವಕ್ತ್ರ ಪವಿತ್ರಗಾತ್ರ ।
ಕಾರುಣ್ಯರೂಪ ಸುಕಲಾಪ ಮಹಾಪ್ರತಾಪ ಪ್ರಾರಬ್ಧಕಾರ್ಯಮುರುಧೈರ್ಯ ಭವೇದವಿಘ್ನಮ್ ॥

## ನವಗ್ರಹಸ್ತೋತ್ರಮ್

ಭಾಸ್ವಾನ್ಮೇ ಭಾಸಯೇತ್ತತ್ತ್ವಂ ಚಂದ್ರಶ್ಚಾಹ್ಲಾದಕೃದ್ಭವೇತ್ । ಮಂಗಲೋ ಮಂಗಲಂ ದದ್ಯಾತ್ ಬುಧಶ್ಚ ಬುಧತಾಂ ದಿಶೇತ್ ॥
ಗುರುರ್ಮೇ ಗುರುತಾಂ ದದ್ಯಾತ್ ಕವಿಶ್ಚ ಕವಿತಾಂ ದಿಶೇತ್ । ಶನಿಶ್ಚ ಶಂ ಪ್ರಾಪಯತು ಕೇತುಃ ಕೇತುಂ ಜಯೇಽರ್ಪಯೇತ್ ॥
ರಾಹುರ್ಮೇ ರಹಯೇದ್ರೋಗಂ ಗ್ರಹಾಸ್ಸಂತು ಕರಗ್ರಹಾಃ । ನವಂ ನವಂ ಮಮೈಶ್ವರ್ಯಂ ದಿಶಂತ್ವೇತೇ ನವಗ್ರಹಾಃ ॥
ಶನೇ ದಿನಮಣೇಃ ಸೂನೋ ಹ್ಯನೇಕಗುಣಸನ್ಮಣೇ । ಅರಿಷ್ಟಂ ಹರ ಮೇಽಭೀಷ್ಟಂ ಕುರು ಮಾ ಕುರು ಸಂಕಟಮ್ ॥
ಹರೇರನುಗ್ರಹಾರ್ಥಾಯ ಶತ್ರೂಣಾಂ ನಿಗ್ರಹಾಯ ಚ । ವಾದಿರಾಜಯತಿಪ್ರೋಕ್ತಂ ಗ್ರಹಸ್ತೋತ್ರಂ ಸದಾ ಪಠೇತ್ ॥

# ಷೋಡಶಸಂಸ್ಕಾರಾಃ

ಶ್ಲೋಕಃ ಗರ್ಭಾಧಾನಂ ಪುಂಸವನಂ ಸೀಮಂತೋ ವೈಷ್ಣವೋ ಬಲಿಃ ।
ಜಾತಕಂ ನಾಮ ನಿಷ್ಕ್ರಾಮೋಽನ್ನಾಶನಂ ಚೌಲಕರ್ಮ ಚ ॥
ಉಪನೀತಿಃ ಮಹಾನಾಮ್ನೀ ಮಹಾವ್ರತಮತಃ ಪರಮ್ ।
ಉಪನಿಷಚ್ಚ ಗೋದಾನಂ ಸಮಾವರ್ತನಮೇವ ಚ ॥

ವಿವಾಹಶ್ಚೈವಮಿತ್ಯೇತಾಃ ಸಂಸ್ಕಾರಾಃ ಷೋಡಶ ಕ್ರಿಯಾಃ ।
ಆಧಾನಾತ್ ಚೌಲಪರ್ಯಂತಾಃ ಸಂಸ್ಕಾರಾಃ ದೋಷಮಾರ್ಜನಾಃ ॥

ಬಂಧನಾತ್ ಸ್ನಾನಪರ್ಯಂತಾಃ ಅತಿಶಯಾಧಾನಮುಚ್ಯತೇ ।
ವೈವಾಹಿಕೇತಿ ಸಂಸ್ಕಾರಃ ಸ್ಮೃತ ಊನಾಂಗಪೂರಣಃ ॥
ಸಂಸ್ಕಾರರಹಿತಾ ಯೇ ತು ತೇಷಾಂ ಜನ್ಮ ನಿರರ್ಥಕಮ್ ॥

ಅರ್ಥ: ಗರ್ಭಾಧಾನ, ಪುಂಸವನ, ಸೀಮಂತ, ವಿಷ್ಣುಬಲಿ, ಜಾತಕರ್ಮ, ನಾಮಕರಣ, ಉಪನಿಷ್ಕ್ರಮಣ, ಅನ್ನಪ್ರಾಶನ, ಚೌಲ, ಉಪನಯನ, ಮಹಾನಾಮ್ನೀ, ಮಹಾವ್ರತ, ಉಪನಿಷದ್ವ್ರತ, ಗೋದಾನವ್ರತ, ಸಮಾವರ್ತನ, ವಿವಾಹ -ಹೀಗೆ ಹದಿನಾರು ಮುಖ್ಯ ಸಂಸ್ಕಾರಗಳು ಮತ್ತು ಅನವಲೋಭನ, ಕರ್ಣವೇಧಾದಿ ಕೆಲವು ಉಪಸಂಸ್ಕಾರಗಳು. ಗರ್ಭಾಧಾನದಿಂದ ಚೌಲದ ತನಕ ಸಂಸ್ಕಾರಗಳು ಬೀಜ-ಕ್ಷೇತ್ರಗಳಲ್ಲಿ ಉಂಟಾದ ದೋಷಮಾರ್ಜನಗಳೆಂದೂ ಉಪನಯನ ಮೊದಲುಗೊಂಡು ಸಮಾವರ್ತನದ ತನಕ ಸಂಸ್ಕಾರಗಳು ವಿಶೇಷ ಜ್ಞಾನಾರ್ಜನೆಯ ಸಾಧನೆಯ ಮೂಲಕ ಆಚಾರ-ವಿಚಾರಗಳಲ್ಲಿ ಆಧ್ಯಾತ್ಮಿಕ ಜೀವನಕ್ಕೆ ಅತಿಶಯವನ್ನುಂಟುಮಾಡುವುದೆಂದೂ ಕೊನೆಯ ವಿವಾಹವಿಧಿಯು ಜೀವನದ ಸಾರ್ಥಕತೆಯ ಪೂರ್ಣತೆಯನ್ನು ಗಳಿಸುವುದೆಂದೂ ಜ್ಞಾನಿಗಳ ಮತ. ಮೇಲೆ ತಿಳಿಸಿದ ಸಂಸ್ಕಾರರಹಿತನಾದವನ ಬಾಳುವಿಕೆ ನಿರರ್ಥಕವೆಂದೂ ಸ್ಮೃತಿವಚನ.

---

## ಶೌನಕೀಯಪುಣ್ಯಾಹಲಘುಕಾರಿಕಾಃ

ಶ್ಲೋ: ಸ್ವಸ್ತಿವಾಚನಮತ್ರೇಷ್ಟಂ ಸರ್ವೇಷಾಮೃದ್ಧಿಕಾರಣಮ್ । ಆದಾವಂತೇ ಪ್ರಯೋಕ್ತವ್ಯಮಿತಿ ಯಜ್ಞವಿದೋ ವಿದುಃ ॥ ೧
ವಾಮೇ ಗುರುಪದಂ ಪ್ರೋಕ್ತಂ ದಕ್ಷಿಣೇ ಗಣನಾಯಕಃ। ಮಧ್ಯೇ ತು ಮಂಡಲಂ ಕಾರ್ಯಂ ಪುಣ್ಯಾಹೇ ಸಮುದೀರಿತಮ್ ॥ ೨
ಅಷ್ಟಾವಿಂಶತಿರೇಖಾಭಿಃ ಸಂಯುಕ್ತಂ ಪುಣ್ಯಮಂಡಲಮ್ । ದಸ್ರಾದಿತಾರಕಾರೂಪಂ ಹಸ್ತಮಾತ್ರಂ ವಿದೋ ವಿದುಃ ॥ ೩



ಏವಂ ತು ಮಂಡಲಂ ಪ್ರೋಕ್ತಂ ಕುಂಭದ್ವಯಮಥಾರ್ಚಯೇತ್ । ಉತ್ತರೇ ವರುಣಂ ಧ್ಯಾತ್ವಾ ಸವಿತಾರಂ ಚ ದಕ್ಷಿಣೇ ॥ ೪
ಧೂಪದೀಪೌ ಪ್ರಕುರ್ವೀತ ಪುಣ್ಯಾಹಂ ವಾಚಯೇತ್ಸುಧೀಃ । ಬಹ್ವೃಚೋತ್ತರಯಾ ತದ್ವದಾಪೋಹಿಷ್ಠಾದಿಭಿಸ್ತಥಾ ॥ ೫
ವೈಶ್ವದೇವೇನಾಭಿಮಂತ್ರ್ಯ ಆನೋ ಭದ್ರೇತಿ ದ್ವಿರ್ಋಚಾ । ಅಪ್ಪಭಿಷ್ಟಾಪನ ಇತಿ ಕಯಾನಶ್ಚಿತ್ರ ಮಂತ್ರಕೈಃ ॥ ೬
ಏತೋನ್ವಿಂದ್ರೇತಿ ತಿಸೃಭಿಃ ನವಭಿಃ ಪಾವಮಾನಿಕೈಃ । ತರತ್ಸಮಂದೀಸೂಕ್ತೇನ ಶುಚೀವ ಇತಿ ವಿಕಯಾ ॥ ೭
ಯದಂತಿಭಿಃ ದ್ವಾದಶಭಿಃ ಖಿಲಸ್ಯೈಕಯುಚಾ ತಥಾ । ಅಗ್ನಿಃಶುಚೀತಿ ಮಂತ್ರಾಭ್ಯಾಂ ಮಾರ್ಜನಂ ಸಮುದೀರಿತಮ್ ॥ ೮
ಕುಶಾಂಬುಭಿಸ್ತು ಕರ್ತಾರಂ ಪ್ರೋಕ್ಷಯೇಯುರಿಮೇ ದ್ವಿಜಾಃ । ಕಾರ್ಯಮಾಭ್ಯುದಯಿಕಂ ಶ್ರಾದ್ಧಂ ಶ್ರೌತೇ ಸ್ಮಾರ್ತೇ ಚ ಕರ್ಮಣಿ ॥ ೯
ಇದಂ ಶ್ರಾದ್ಧಂ ಪ್ರಕುರ್ವಂತಿ ದ್ವಿಜಾ ವೃದ್ಧಿನಿಮಿತ್ತಕಮ್ । ಶುಭಾರ್ಥೀ ಪ್ರಥಮಾಂತೇನ ವೃದ್ಧೌ ಸಂಕಲ್ಪಮಾಚರೇತ್ ॥ ೧೦

॥ ಇತಿ ಲಘುಕಾರಿಕಾಃ ॥

## ಪುನಃಸಂಧಾನಮ್

ಅಮರಾರಿಕುಲಾಧೀಶಹವಿರಗ್ನಿಮುಖಾಯಿತಮ್ ।
ಅವ್ಯಾಜಮಿತ್ರಮಾರ್ತಾನಾಮಾಶ್ರಯೇ ಶ್ರೀಸಖಂ ಮಹಃ ॥

ಅಗ್ನಿರಹಿತಾಃ ದ್ವಿಜಾಃ ವೈದಿಕಲೌಕಿಕಕಾರ್ಯೇಷು ಅನರ್ಹಾ ಭವಂತಿ । ಅತಃ ಬ್ರಹ್ಮಚರ್ಯೇ ಸ್ಥಿತಾಃ ಪ್ರಾತಃ ಸಾಯಂ ಸಮುದ್ಭವನಾಮ್ನಃ ಅಗ್ನೇಃ, ಸ್ನಾತಕಃ ಸೂರ್ಯನಾಮ್ನಃ ಅಗ್ನೇಃ, ಗೃಹಸ್ಥಃ ವಿವಾಹದಿನಾತ್ ಸಾಯಂ-ಪ್ರಾತಃ ಯೋಜಕನಾಮ್ನಃ ಗೃಹ್ಯಾಗ್ನೇಃ ಉಪಾಸನಾಂ ಕುರ್ಯಾತ್ । ಏವಂ ಯಾವಜ್ಜೀವಮಗ್ನೇಃ ಆರಾಧನಂ ದ್ವಿಜೈಃ ಅವಶ್ಯಂ ಕರಣೀಯಮ್ ।

ಯದಿ ಪ್ರಯಾಣಾದಿಷು ವಿಸ್ತರತಃ ಅಗ್ನೇಃ ಆರಾಧನಂ ಕರ್ತುಂ ನ ಶಕ್ಯತೇ ತದಾ 'ಆಜ್ಯೇನ ಜಲೇನ ವಾ' ಇತ್ಯಾದಿಸ್ಮೃತಿವಚನರೀತ್ಯಾ ಯಥಾಶಕ್ತಿ ಕರಣೀಯಮ್ । ಔಪಾಸನಾದ್ಯಕರಣೇ ಸ್ವಪುತ್ರಾಣಾಂ ಶಿಷ್ಯಾಣಾಂ ಚ ಆಧಾನಾದಿವಿವಾಹಾಂತಸಂಸ್ಕಾರಾನ್, ತಥಾ ಶಾಂತಿಪ್ರಯೋಗಾಂಶ್ಚ ಕರ್ತುಂ ದ್ವಿಜಃ ಅನರ್ಹಃ ಭವತಿ । ರೋಗಾದಿನಾ ಗೃಹ್ಯಾಗ್ನೇಃ ವಿಚ್ಛೇದೇ ಪುನಸ್ಸಂಧಾನವಿಧಿನಾ ಅಗ್ನಿಃ ಅವಶ್ಯಂ ಸಂಪಾದನೀಯಃ ॥ ಅತ್ರೋಕ್ತಮಂತ್ರಾಃ ಅಗ್ನಿಮುಖಪ್ರಯೋಗೇ ಜ್ಞೇಯಾಃ ॥



## ಕಾರಿಕಾ

ಉಪಲೇಪಾದಿಕಂ ಕುರ್ಯಾತ್ ಆಘಾರಾಂತಂ ವಿವಾಹವತ್ । ವಿವಾಹಾಜ್ಯಾಹುತೀರ್ಹುತ್ವಾ ಲಾಜಹೋಮೋ ಭವೇದಿಹ ।
ಗೃಹಪ್ರವೇಶನೀಯಾಂಶ್ಚ ಹುತ್ವಾ ಸ್ಯಾದ್ಧೃದಯಾಂಜನಮ್ । ಪರಿಣೇತ್ರಾದಿನಾ ತತ್ರ ಲಾಜಾನಾವಪತಿ ಸ್ವಯಮ್ ॥

ಕೃತಸತ್ಕ್ರಿಯಃ ಯಜಮಾನಃ ಸಪತ್ನೀಕಃ ಸ್ವಸ್ತಿವಾಚನಾಭ್ಯುದಯಿಕೇ ಕೃತ್ವಾ, ದೇಶಕಾಲೌ ಸಂಕೀರ್ತ್ಯ ಶುಭತಿಥೌ ಅಸ್ಮದಾದಿಗುರೂಣಾಂ ಶ್ರೀಮನ್ಮಧ್ವಾಚಾರ್ಯಾಣಾಂ ಹೃತ್ಕಮಲಮಧ್ಯನಿವಾಸಿವಾಸುದೇವಸಂಕರ್ಷಣಪ್ರದ್ಯುಮ್ನಾನಿರುದ್ಧಚತುರ್ಮೂರ್ತ್ಯಾದ್ಯನಂತಾವತಾರಾತ್ಮಕಾಗ್ನ್ಯಂತರ್ಗತಪರಿಣೇಪತಿಶ್ರೀಪರಶುರಾಮಪ್ರೇರಣಯಾ, ಶ್ರೀಪರಶುರಾಮಪ್ರೀತ್ಯರ್ಥಂ ಔಪಾಸನಕಾಲಾತ್ ಏತತ್ಕಾಲಪರ್ಯಂತಂ ವಿಚ್ಛಿನ್ನಸ್ಯ ಗೃಹ್ಯಾಗ್ನೇಃ ಪುನಃಸಂಧಾನಂ ಕರಿಷ್ಯೇ । ಸ್ಥಂಡಿಲೋಲ್ಲೇಖನಾದ್ಯಗ್ನಿಪ್ರತಿಷ್ಠಾಪನಂ ಕರಿಷ್ಯೇ ॥

ಉಲ್ಲಿಖೇದುದಗಾಯಾಮಾಂ ತಸ್ಯಾ ಉಭಯತೋಽಪರೇ । ಪೂರ್ವಾಯಾಮೇ ಉದಕ್ಸಂಸ್ಥೇ ಅಸಂಸ್ಪೃಷ್ಟೇ ಚ ಪೂರ್ವಯಾ ॥ ಮಧ್ಯೇ ತಿಸ್ರ ಉದಕ್ಸಂಸ್ಥಾಃ ಪೂರ್ವಾಯಾಮಾ ಅಸಂಹತಾಃ । ಲಿಖಿತಾ ಯೇನ ಶಕಲಂ ಯಾಜ್ಞೀಯಂ ತನ್ನಿಧಾಯ ಚ । ಅದ್ಭಿರಭ್ಯುಕ್ಷ್ಯ ಶಕಲಂ ನಿರಸ್ಯಾಪ ಉಪಸ್ಪೃಶೇತ್ ॥ ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಉಮಾ ಲಕ್ಷ್ಮೀಃ ಸರಸ್ವತೀ । ಷಡ್ರೇಖಾದೇವತಾಃ ಪ್ರೋಕ್ತಾಃ ಸ್ಥಂಡಿಲೋಲ್ಲೇಖನಕ್ರಮಾತ್ ॥

ಸ್ಥಂಡಿಲಾದಾಗ್ನೇಯ್ಯಾಂ ದರ್ಭಾನ್ ಪ್ರಸಾರ್ಯ ಅಗ್ನೇರಾಹ್ವಾನಂ ಕುರ್ಯಾತ್

ಏಹ್ಯಗ್ನೇ ರಾಹೂಗಣೋ ಗೌತಮೋಽಗ್ನಿಸ್ತ್ರಿಷ್ಟುಪ್ । ಅಗ್ನೇರಾಹ್ವಾನೇ ವಿನಿಯೋಗಃ ॥



ಓಂ ಏಹ್ಯಗ್ನ ಇಹ ಹೋತಾ ನಿ ಷೀದಾದಬ್ಧಃ ಸು ಪುರಏತಾ ಭವಾ ನಃ । ಅವತಾಂ ತ್ವಾ ರೋದಸೀ ವಿಶ್ವಮಿನ್ವೇ ಯಜಾ ಮಹೇ ಸೌಮನಸಾಯ ದೇವಾನ್ ॥



ತೈಜಸಪಾತ್ರದ್ವಯೇನ ಸಂಪುಟೀಕೃತ್ಯ ಪತ್ನ್ಯಾಹೃತಮಗ್ನಿಂ ಪ್ರಸಾರಿತದರ್ಭಾಣಾಮುಪರಿ ನಿಕ್ಷಿಪೇತ್ । ಸಂಪುಟಂ ದೂರೀಕೃತ್ಯ

ಜುಷ್ಟೋ ದಮೂನಾ ಆತ್ರೇಯೋ ವಸುಶ್ರುತೋಽಗ್ನಿಸ್ತ್ರಿಷ್ಟುಪ್ । ಅಗ್ನೇರಾವಾಹನೇ ವಿನಿಯೋಗಃ ॥

ಓಂ ಜುಷ್ಟೋ ದಮೂನಾ ಅತಿಥಿರ್ದುರೋಣ ಇಮಂ ನೋ ಯಜ್ಞಮುಪ ಯಾಹಿ ವಿದ್ವಾನ್ । ವಿಶ್ವಾ ಅಗ್ನೇ ಅಭಿಯುಜೋ ವಿಹತ್ಯಾ ಶತ್ರೂಯತಾಮಾ ಭರಾ ಭೋಜನಾನಿ ॥ ಅಕ್ಷತಾನ್ ಕ್ಷಿಪ್ತ್ವಾ ರಂ ಸಹಸ್ರಾರ ಹುಂ ಫಟ್

ಇತಿ ಕ್ರವ್ಯಾದಾಗ್ನಿಂ ದರ್ಭದ್ವಯೇನ ಪ್ರಜ್ವಾಲ್ಯ ಆಗ್ನೇಯ್ಯಾಂ ನಿರಸ್ಯ ಅಪ ಉಪಸ್ಪೃಶ್ಯ ಸಮಸ್ತವ್ಯಾಹೃತೀನಾಂ ಪರಮೇಷ್ಠೀ ಪ್ರಜಾಪತಿಃ ಪ್ರಜಾಪತಿರ್ಬೃಹತೀ ಅಗ್ನಿಪ್ರತಿಷ್ಠಾಪನೇ ವಿನಿಯೋಗಃ ॥ ಓಂ ಭೂರ್ಭುವಃಸ್ವರೋಮ್ ॥ ಇತಿ ಷಡ್ರೇಖಾಸು "ದ್ವಿಜ" ನಾಮಾನಮಗ್ನಿಂ ಪ್ರತಿಷ್ಠಾಪ್ಯ ಅಗ್ನ್ಯಾಹರಣಪಾತ್ರಯೋಃ ಅಕ್ಷತೈಸ್ಸಹೋದಕಮಾಸಿಚ್ಯ ಪ್ರೋಕ್ಷಿತೇಂಧನಾನಿ ನಿಕ್ಷಿಪೇತ್ ।

ಅಗ್ನಿನಾಗ್ನಿಃ ಕಾಣ್ವೋ ಮೇಧಾತಿಥಿರಗ್ನಿರ್ಗಾಯತ್ರೀ । ಅಗ್ನಿಸಮಿಂಧನೇ ವಿನಿಯೋಗಃ ॥

ಓಮ್ ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹಪತಿರ್ಯುವಾ । ಹವ್ಯವಾಡ್ ಜುಹ್ವಾಸ್ಯಃ ॥

ವಿಜ್ಯೋತಿಷೇತ್ಯಸ್ಯ ಮಂತ್ರಸ್ಯ ವೃಷೋಽಗ್ನಿಸ್ತ್ರಿಷ್ಟುಪ್ । ಅಗ್ನಿಪ್ರಜ್ವಾಲನೇ ವಿನಿಯೋಗಃ ॥

6 ಸಂಧಾನಮ್

ಓಂ ವಿ ಜ್ಯೋತಿಷಾ ಬೃಹತಾ ಭಾತ್ಯಗ್ನಿರಾವಿರ್ವಿಶ್ವಾನಿ ಕೃಣುತೇ ಮಹಿತ್ವಾ । ಪ್ರಾದೇವೀರ್ಮಾಯಾಃ ಸಹತೇ ದುರೇವಾಃ ಶಿಶೀತೇ ಶೃಂಗೇ ರಕ್ಷಸೇ ವಿನಿಕ್ಷೇ ॥ ಜ್ವಲಿತೇ ಸತಿ

ಅಗ್ನಿಂ ಪ್ರಜ್ವಲಿತಂ ವಂದೇ ಜಾತವೇದಂ ಹುತಾಶನಮ್ । ಸುವರ್ಣವರ್ಣಮನಲಂ ಸಮಿದ್ಧಂ ವಿಶ್ವತೋಮುಖಮ್ ॥ ಶ್ರೀಯಜ್ಞಪುರುಷಾಯ ನಮಃ ॥

ಇತಿ ಪತ್ನೀಸಹಿತಃ ಪ್ರಜ್ವಲಿತಂ ಅಗ್ನಿಂ ಪ್ರಾರ್ಥ್ಯ, ನಮಸ್ಕೃತವತ್ಯಾಃ ಪತ್ನ್ಯಾಃ ಅಕ್ಷತಪುಷ್ಪಾಣಿ ದದ್ಯಾತ್ ।

ಅಗ್ನೇ ಅಚ್ಛಾ ತಾಪಸೋಽಗ್ನಿರಗ್ನಿರನುಷ್ಟುಪ್ । ಅಗ್ನಿಪ್ರತ್ಯಙ್ಮುಖೀಕರಣೇ ವಿನಿಯೋಗಃ ॥

ಓಂ ಅಗ್ನೇ ಅಚ್ಛಾ ವದೇಹ ನಃ ಪ್ರತ್ಯಙ್ ನಃ ಸುಮನಾ ಭವ । ಪ್ರ ನೋ ಯಚ್ಛ ವಿಶಸ್ಪತೇ ಧನದಾ ಅಸಿ ನಸ್ತ್ವಮ್ ॥ ಏಷ ಹಿ ದೇವಃ ಪ್ರದಿಶೋ ನು ಸರ್ವಾಃ ಪೂರ್ವೋ ಹಿ ಜಾತಃ ಸ ಉ ಗರ್ಭೇ ಅಂತಃ । ಸವಿಜಾಯಮಾನಃ ಸಜನಿಷ್ಯಮಾಣಃ ಪ್ರತ್ಯಙ್ಮುಖಾಸ್ತಿಷ್ಠತಿ ವಿಶ್ವತೋಮುಖಃ ॥

ಓಂ ಮೇಷಾರೂಢಾಯ ವೈಶ್ವಾನರಾಯ ಶಾಂಡಿಲ್ಯಗೋತ್ರಾಯ ವರಪ್ರದಾಯ ಶ್ರೀಯಜ್ಞಪುರುಷಾಯ ನಮಃ । (ಇತಿ ಅಕ್ಷತೋದಕಂ ನಿಕ್ಷಿಪ್ಯ ಸಮ್ಮುಖೀಮುದ್ರಯಾ) ಪ್ರಾಙ್ಮುಖೋ ದೇವ ಮಮ ಸಮ್ಮುಖೋ ಭವ ।

ಚತ್ವಾರಿ ಶೃಂಗಾ ಗೌತಮೋ ವಾಮದೇವೋ ಜಾತವೇದಾಗ್ನಿಸ್ತ್ರಿಷ್ಟುಪ್ । ಅಗ್ನಿಮೂರ್ತಿಧ್ಯಾನೇ ವಿನಿಯೋಗಃ ॥

7 ಸಂಧಾನಮ್

ಓಂ ಚತ್ವಾರಿ ಶೃಂಗಾ ತ್ರಯೋ ಅಸ್ಯ ಪಾದಾ ದ್ವೇ ಶೀರ್ಷೇ ಸಪ್ತ ಹಸ್ತಾಸೋ ಅಸ್ಯ । ತ್ರಿಧಾ ಬದ್ಧೋ ವೃಷಭೋ ರೋರವೀತಿ ಮಹೋ ದೇವೋ ಮರ್ತ್ಯಾಂ ಆ ವಿವೇಶ ॥

ಸಪ್ತಹಸ್ತಶ್ಚತುಃಶೃಂಗಃ ಸಪ್ತಜಿಹ್ವೋ ದ್ವಿಶೀರ್ಷಕಃ । ತ್ರಿಪಾತ್ಪ್ರಸನ್ನವದನಃ ಸುಖಾಸೀನಃ ಶುಚಿಸ್ಮಿತಃ ॥ ೧ ॥ ಸ್ವಾಹಾಂ ತು ದಕ್ಷಿಣೇ ಪಾರ್ಶ್ವೇ ದೇವೀಂ ವಾಮೇ ಸ್ವಧಾಂ ತಥಾ । ಬಿಭ್ರದ್ದಕ್ಷಿಣಹಸ್ತೈಸ್ತು ಶಕ್ತಿಮನ್ನಂ ಸ್ರುಚಂ ಸ್ರುವಮ್ ॥ ೨ ॥ ತೋಮರಂ ವ್ಯಜನಂ ವಾಮೇ ಘೃತಪಾತ್ರಂ ಚ ಧಾರಯನ್ । ಮೇಷಾರೂಢೋ ಜಟಾಬದ್ಧೋ ಗೌರವರ್ಣೋ ಮಹೌಜಸಃ ॥ ೩ ॥ ಧೂಮ್ರಧ್ವಜೋ ಲೋಹಿತಾಕ್ಷಃ ಸಪ್ತಾರ್ಚಿಃ ಸರ್ವಕಾಮದಃ । ಆತ್ಮಾಭಿಮುಖಮಾಸೀನ ಏವಂರೂಪೋ ಹುತಾಶನಃ ॥ ೪ ॥

ತ್ರಿನಯನಮರುಣಾಬ್ಜಾಬದ್ಧಮೌಲಿಂ ಸುಶುಕ್ಲಾಂಶುಕಮರುಣಮನೇಕಾಕಲ್ಪಮಂಭೋಜಸಂಸ್ಥಮ್ । ಅಭಿಮತವರಶಕ್ತಿಸ್ವಸ್ತಿಕಾಭೀತಿಹಸ್ತಂ ನಮತ ಕನಕಮಾಲಾಲಂಕೃತಾಂಗಂ ಕೃಶಾನುಮ್ ॥ ಶ್ರೀಯಜ್ಞಪುರುಷಾಯ ನಮಃ ॥ ಅಂಗಾರವರ್ಣಮಭಿತೋಽಂಡಬಹಿಃಪ್ರಭಾಭಿರ್ವ್ಯಾಪ್ತಂ ಪರಶ್ವಧಧನುರ್ಧರಮೇಕವೀರಮ್ । ಧ್ಯಾಯೇದಶೇಷಪುರುಹೂತಮುಖೈಃ ಸ್ತುವದ್ಭಿರಾವೀತಮಾತ್ಮಪದವೀಂ ಪ್ರತಿಪಾದಯಂತಮ್ ॥ ಅಗ್ನ್ಯಂತರ್ಗತಶ್ರೀಪರಶುರಾಮಾಯ ನಮಃ ॥

ಪ್ರತ್ಯವರೋಹೇತಿ ಹಿರಣ್ಯಗರ್ಭೋಽಗ್ನಿಸ್ತ್ರಿಷ್ಟುಪ್ । ಅಗ್ನಿಪ್ರತ್ಯವರೋಹಣೇ ವಿನಿಯೋಗಃ ॥

ಓಂ ಪ್ರತ್ಯವರೋಹ ಜಾತವೇದಃ ಪುನಸ್ತ್ವಂ ದೇವೇಭ್ಯೋ ಹವ್ಯಂ ವಹತು ಪ್ರಜಾನನ್ । ಪ್ರಜಾಂ ಪುಷ್ಟಿಂ ರಯಿಮಸ್ಮಾಸು ಧೇಹ್ಯಥಾ ಭವ ಯಜಮಾನಾಯ ಶಂ ಯೋಃ ॥ ಇತಿ ಮಂತ್ರಪಠನಮ್ । ದೇಶಕಾಲೌ ಸಂಕೀರ್ತ್ಯ ।

......ಶುಭತಿಥೌ ಅಗ್ನ್ಯಂತರ್ಗತಶ್ರೀಪರಶುರಾಮಪ್ರೇರಣಯಾ ಅಗ್ನ್ಯಂತರ್ಗತಶ್ರೀಪರಶುರಾಮಪ್ರೀತ್ಯರ್ಥಂ ಪುನಃಸಂಧಾನಹೋಮೇ ದೇವತಾಪರಿಗ್ರಹಾರ್ಥಂ ಅನ್ವಾಧಾನಂ ಕರಿಷ್ಯೇ । ಸಮಿದ್ದ್ವಯಂ ಗೃಹೀತ್ವಾ ಅಸ್ಮಿನ್ನನ್ವಾಹಿತೇ ಅಗ್ನೌ ಜಾತವೇದಸಮಗ್ನಿಮಿಧ್ಮೇನ ಪ್ರಜಾಪತಿಂ ಪ್ರಜಾಪತಿಂ ಚಾಘಾರದೇವತೇ ಆಜ್ಯೇನ [ಅಗ್ನೀಷೋಮೌ ಚಕ್ಷುಷೀ ಅಸ್ಮಿನ್ ಹೋಮೇ ನ ಸ್ತಃ] ಅತ್ರ ಪ್ರಧಾನಂ ಪ್ರಧಾನ–

